ಪ್ರಥಮ ಮುದ್ರಣ : ೧೯೪೭

ಬೆಲೆ : ಒಂದು ರೂಪಾಯಿ

ಮುದ್ರಕರು :
ಆರ್. ಎನ್. ಹಬ್ಬು,
ಉಷಾ ಪ್ರೆಸ್, ನೀಲಗಿರಿ ರೋಡ್,
ಮೈಸೂರು

# ಮೊದಲ ಮಾತು

ಡೆನ್ಮಾರ್ಕಿನ ಪ್ರಸಿದ್ಧ ಕಥೆಗಾರನಾದ ಹ್ಯಾನ್ಸ್ ಕ್ರಿಶ್ಚಿಯನ್ ಆಂಡರ್‌ಸನ್ ಎಂಬಾತನ ಏಳು ಕಥೆಗಳ ಅನುವಾದವನ್ನು ಇಲ್ಲಿ ಕೊಟ್ಟಿದೆ. ಪಾಶ್ಚಾತ್ಯಭಾಷೆಗಳ ಶಿಶು ಸಾಹಿತ್ಯದಲ್ಲಿ ಆಂಡರ್‌ಸನ್ ಮತ್ತು ಗ್ರಿಮ್ ಹಿರಿಯ ಹೆಸರನ್ನು ಗಳಿಸಿದ್ದಾರೆ. ಅವರ ಕಥೆಗಳು ಎಲ್ಲೆಲ್ಲೂ ಬಾಲಕರ ಆದರಕ್ಕೆ ಪಾತ್ರವಾಗಿ ಪ್ರಖ್ಯಾತವಾಗಿವೆ. ಸಾಧ್ಯವಾದಷ್ಟು ಮಟ್ಟಿಗೂ ಅವನ್ನು ಕನ್ನಡಕ್ಕೆ ಭಾಷಾಂತರಿಸಬೇಕೆಂಬುದು ನನ್ನ ಉತ್ಕಟ ಅಭಿಲಾಷೆಗಳಲ್ಲೊಂದು. ನಾನು ಈಗಾಗಲೆ ಅನುವಾದಿಸಿರುವ ಗ್ರಿಮ್ ಸಹೋದರರ ಸುಮಾರು ಮೂವತ್ತೈದು ಕಥೆಗಳನ್ನೂ ಅಚ್ಚುಮಾಡಿಸಿ ಕನ್ನಡನಾಡಿನ ಕಿರಿಯರಿಗೆ ಅರ್ಪಿಸಲು ತವಕಿಸುತ್ತಿದ್ದೇನೆ. ಸಹೃದಯರ ಬೆಂಬಲದಿಂದ ಆ ಕೆಲಸ ಇಷ್ಟರಲ್ಲೇ ಸಾಧ್ಯವಾದೀತೆಂಬ ಭರವಸೆಯಿದೆ.

ಅಗತ್ಯವಾದಾಗಲೆಲ್ಲಾ ಕಥೆಗಳ ಸನ್ನಿವೇಶಗಳನ್ನು ನಮ್ಮ ಸಮಾಜದ ರೀತಿನೀತಿಗಳಿಗೆ ಸರಿಹೊಂದುವಂತೆ ಮಾರ್ಪಾಟು ಮಾಡಿದ್ದೇನೆ.

ಪುಸ್ತಕದಲ್ಲಿ ಚಿತ್ರಗಳಿಲ್ಲದಿರುವುದು ಒಂದು ದೊಡ್ಡ ಕೊರತೆ. ಕನಿಷ್ಠ ಪಕ್ಷಕ್ಕೆ ಕಥೆಗೆ ಒಂದು ಚಿತ್ರವನ್ನಾದರೂ ಕೊಡಬೇಕೆಂದಿದ್ದ ಉದ್ದೇಶವನ್ನು ಕೈಗೂಡಿಸಲು ಕಾರಣಾಂತರದಿಂದ ಸಾಧ್ಯವಾಗದೆ ಹೋದುದಕ್ಕಾಗಿ ವಿಷಾದಿಸುತ್ತೇನೆ.

ಈ ಕಥೆಗಳ ಪ್ರಕಟನ ಕಾರ್ಯದಲ್ಲಿ ವಿಶೇಷ ಆಸಕ್ತಿ ವಹಿಸಿ ಪ್ರಸಿದ್ಧ ಲೇಖಕರೂ ಹೊಸಗನ್ನಡದ ಶಿಶು ಸಾಹಿತ್ಯ ನಿರ್ಮಾಪಕರಲ್ಲಿ ಅಗ್ರಗಣ್ಯರೂ ಆದ ನನ್ನ ಮಾನ್ಯ ಮಿತ್ರರು ಶ್ರೀಮಾನ್ ಜಿ. ಪಿ ರಾಜರತ್ನಂ ಅವರು ಬಹಳ ಸಹಾಯಮಾಡಿದ್ದಾರೆ. ಅವರ ಉಪಕಾರವನ್ನು ಇಲ್ಲಿ ಸ್ಮರಿಸುವುದು ನನ್ನ ಕರ್ತವ್ಯ, ನನಗೊಂದು ಸಂತೋಷ.

ಈ ಕಥೆಗಳನ್ನು ಓದಿ ನಾಲ್ಕು ಮಕ್ಕಳು ನಲಿದರೆ ನಾನು ಧನ್ಯ.

ಬೆಂಗಳೂರು ನಗರ,
೨೫—೧೨—೧೯೪೬

ಎಂ. ರಾಮರಾವ್

# ವಿಷಯ ಸೂಚಿಕೆ

# ಚಕ್ರವರ್ತಿಯ ಕೋಗಿಲೆ

ಚೀನಾ ದೇಶದ ಚಕ್ರವರ್ತಿ ಚೀನೀಯನೆಂದು ನಿಮಗೆ ಗೊತ್ತೇ ಇದೆ. ಅವನ ಸುತ್ತಲೂ ಇರುವ ಓಲಗದವರೂ ಅವನ ಹಾಗೆಯೇ ಚೀನಿಯರೇ. ನಾನು ಈಗ ಹೇಳುವ ಕಥೆ ನಡೆದು ಬಹಳ ಕಾಲವಾಯಿತು. ಆ ಕಾರಣ ದಿಂದಲೇ ನೀವು ಅವನ್ನು ಕೇಳಬೇಕು. ಇಲ್ಲದಿದ್ದರೆ ಅದು ಮರೆತೇ ಹೋಗುತ್ತದೆ.

ಚಕ್ರವರ್ತಿಯ ಅರಮನೆ ಜಗತ್ತಿನಲ್ಲೆಲ್ಲಾ ಅತ್ಯಂತ ಸುಂದರವಾದುದಾ ಗಿತ್ತು. ಅದನ್ನು ಸೊಗಸಾದ ಚೀನಾ ಮಣ್ಣಿನಿಂದ ಮಾಡಿದ್ದರು. ಅದು ಮುಟ್ಟಿ ದರೆ ಮುರಿದು ಬೀಳುವಷ್ಟು ಸೂಕ್ಷ್ಮವಾಗಿತ್ತು. ಅರಮನೆಯ ತೋಟದಲ್ಲಿ ಅನೇಕ ಅಸಾಧಾರಣವಾದ ಹೂಗಳಿದ್ದುವು. ಅವುಗಳಲ್ಲಿ ಹೆಚ್ಚು ಸೌಂದರ್ಯ ವಿದ್ದ ಹೂಗಳಿಗೆ ಬೆಳ್ಳಿಯ ಗಂಟೆಗಳನ್ನು ಕಟ್ಟಿದ್ದರು. ಅವು ಯಾವಾಗಲೂ ಇಂಪಾಗಿ ಧ್ವನಿ ಮಾಡುತ್ತಾ ಹೂಗಳ ಬಳಿ ಬಂದು ಹೋಗುವವರ ಗಮನ ವನ್ನು ಸೆಳೆಯುತ್ತಿದ್ದುವು. ತೋಟದ ಪ್ರತಿಯೊಂದು ಭಾಗವನ್ನೂ ಬಹಳ ಆಲೋಚನೆ ಮಾಡಿ ರಚಿಸಿದ್ದರು. ತೋಟ ಬಹಳ ವಿಶಾಲವಾಗಿತ್ತು. ಅದರ ಕೊನೆ ಎಲ್ಲಿದ್ದಿತೆಂಬುದು ತೋಟಗಾರನಿಗೇ ಗೊತ್ತಿರಲಿಲ್ಲ. ತೋಟದ ಒಂದು ಕಡೆಯಿಂದ ಇನ್ನೊಂದು ಕಡೆಗೆ ಯಾರಾದರೂ ನಡೆದು ಹೋದರೆ ಸುಂದರ ವಾದ ಕಾಡು ಕಾಣಬರುತ್ತಿತ್ತು. ಅದರಲ್ಲಿ ಎತ್ತರವಾದ ಮರಗಳೂ ಆಳ ವಾದ ಕೆರೆಗಳೂ ಇದ್ದುವು. ಕಾಡು ಸಮುದ್ರದ ವರೆಗೂ ಹಬ್ಬಿತ್ತು. ಸಮುದ್ರ ಆಳವಾಗಿ, ನೀಲವಾಗಿ ಇತ್ತು. ದೊಡ್ಡ ದೊಡ್ಡ ಹಡಗುಗಳು ಮರಗಳ ಕೊಂಬೆ ಗಳ ಕೆಳಗೆ ನೇರವಾಗಿ ತೇಲಿ ಬರಬಹುದಾಗಿತ್ತು. ಈ ಮರಗಳಲ್ಲಿ ಒಂದು ಕೋಗಿಲೆ ವಾಸವಾಗಿತ್ತು. ಅದು ಬಹಳ ಮಧುರವಾಗಿ ಹಾಡುತ್ತಿತ್ತು. ಅದರ ಹಾಡನ್ನು ಕೇಳುವುದಕ್ಕೋಸ್ಕರ ಬೆಸ್ತರವನು ಮೀನು ಹಿಡಿಯುವ ಕೆಲಸ ವನ್ನು ಬಿಟ್ಟು ನಿಲ್ಲುತ್ತಿದ್ದ; "ಅಮ್ಮಮ್ಮಾ! ಎಷ್ಟು ಸೊಗಸಾಗಿದೆ!" ಎನ್ನುತ್ತಿದ್ದ. ಆದರೆ ಅವನು ಅಲ್ಲಿ ಬಹಳ ಹೊತ್ತು ನಿಲ್ಲುವಂತಿರಲಿಲ್ಲ. ಕೆಲಸಕ್ಕೆ ಹೋದ ಮೇಲೆ ಕೋಗಿಲೆಯ ಹಾಡನ್ನು ಮರೆತು ಬಿಡುತ್ತಿದ್ದ. ಮಾರನೆಯ

ರಾತ್ರಿ ಮತ್ತೆ ಕೋಗಿಲೆಯ ಗಾಯನವನ್ನು ಕೇಳಿದಾಗ ಅವನು "ಅಮ್ಮಮ್ಮಾ! ಎಷ್ಟು ಸೊಗಸಾಗಿದೆ!" ಎನ್ನುತ್ತಿದ್ದ.

ಜಗತ್ತಿನ ಪ್ರತಿಯೊಂದು ದೇಶದಿಂದಲೂ ಪ್ರಯಾಣಿಕರು ಈ ಚೀನೀ ಚಕ್ರವರ್ತಿಯ ರಾಜಧಾನಿಗೆ ಬಂದು ಹೋಗುತ್ತಿದ್ದರು. ಅವರು ಎಲ್ಲವನ್ನೂ ಬಹಳವಾಗಿ ಮೆಚ್ಚುವರು. ಅರಮನೆಯನ್ನೂ ತೋಟವನ್ನೂ ಹೊಗಳುವರು. ಆದರೆ ಕೋಗಿಲೆಯ ಹಾಡನ್ನು ಕೇಳಿದೊಡನೆ "ಇದು ಮಿಕ್ಕ ಎಲ್ಲಕ್ಕಿಂತ ಉತ್ತಮವಾದುದು" ಎನ್ನುವರು.

ಅವರು ತಮ್ಮ ದೇಶಗಳಿಗೆ ಹಿಂತಿರುಗಿ ಹೋದಾಗ ಚೀನದಲ್ಲಿ ತಾವು ನೋಡಿದ್ದುದನ್ನೆಲ್ಲಾ ವರ್ಣಿಸಿದರು. ಪಂಡಿತರು ಪಟ್ಟಣವನ್ನೂ ಅರಮನೆಯನ್ನೂ ತೋಟವನ್ನೂ ಕುರಿತು ಅನೇಕ ಪುಸ್ತಕಗಳನ್ನು ಬರೆದರು. ಆದರೆ ಕೋಗಿಲೆಯನ್ನು ಯಾರೂ ಮರೆಯಲಿಲ್ಲ ಅವರು ಅದನ್ನೇ ಮೊದಲು ಹೊಗಳುತ್ತಿದ್ದರು. ಕವಿಗಳಾಗಿದ್ದವರು ಅತ್ಯಂತ ಸೊಗಸಾದ ಕವಿತೆಗಳನ್ನು ಬರೆದರು. ಅವರು ಬರೆದುದೆಲ್ಲಾ ಆಳವಾದ ನೀಲವರ್ಣದ ಸಮುದ್ರದ ಸಮೀಪದ ಕಾಡಿನಲ್ಲಿದ್ದ ಕೋಗಿಲೆಗೆ ಸಂಬಂಧಪಟ್ಟ ಕವಿತೆಗಳು. ಈ ಪುಸ್ತಕಗಳು ಪ್ರಪಂಚದಲ್ಲೆಲ್ಲಾ ಪ್ರಚಾರವಾದವು. ಕಾಲಕ್ರಮೇಣ ಅವು ಚಕ್ರವರ್ತಿಯ ಕೈಗೂ ಬಂದವು. ಅವನು ತನ್ನ ಬಂಗಾರದ ಮಂಚದ ಮೇಲೆ ಕುಳಿತು ಅವುಗಳನ್ನು ಮೇಲಿಂದ ಮೇಲೆ ಓದಿದ. ತನ್ನ ನಗರದ, ಅರಮನೆಯ ತೋಟದ, ಸುಂದರವಾದ ವರ್ಣನೆಗಳನ್ನು ಓದಿದಾಗ ಅವನು ಸಂತೋಷದಿಂದ ತಲೆದೂಗಿದ. "ಆದರೆ ಕೋಗಿಲೆ ಇವೆಲ್ಲಕ್ಕಿಂತಲೂ ಉತ್ತಮವಾದುದು" ಎಂಬ ವಾಕ್ಯ ಕಡೆಯಲ್ಲಿ ಅವನ ಕಣ್ಣಿಗೆ ಬಿತ್ತು.

ಚಕ್ರವರ್ತಿ "ಏನಿದು? ಕೋಗಿಲೆಯೆ? ಅದರ ವಿಷಯ ನನಗೇ ಗೊತ್ತಿಲ್ಲವಲ್ಲ! ನನ್ನ ರಾಜ್ಯದಲ್ಲಿ, ಅದೂ ನನ್ನ ಸ್ವಂತ ತೋಟದಲ್ಲಿ ಇಂತಹ ಹಕ್ಕಿ ಇರುವ ಸುದ್ದಿ ಸಮಾಚಾರ ನನಗೆ ಕೂಡ ಬಂದಿಲ್ಲವೆ? ನಾನು ಇದನ್ನು ಒಂದು ಪುಸ್ತಕದಿಂದ ಓದಿ ತಿಳಿದುಕೊಳ್ಳಬೇಕೆ?" ಎಂದುಕೊಂಡ.

ಅನಂತರ ಅವನು ತನ್ನ ಆಸ್ಥಾನದ ಒಬ್ಬ ಅಧಿಕಾರಿಯನ್ನು ಕರೆದ. ಈ ಅಧಿಕಾರಿಯ ಶ್ರೀಮುಖ ಗಾಂಭೀರ್ಯ ಹೇಳತೀರದು. ತನಗಿಂತ ಕೆಳಗಿನವರು

ಯಾರಾದರೂ ತನ್ನನ್ನು ಮಾತಾಡಿಸಿದರೆ ಅಥವಾ ಪ್ರಶ್ನೆ ಮಾಡಿದರೆ ಅವನು ಉತ್ತರವನ್ನೇ ಕೊಡುತ್ತಿರಲಿಲ್ಲ. ಅಷ್ಟು ಅವನ ಜರುಬು!

ಚಕ್ರವರ್ತಿ "ಇಲ್ಲಿ, ನಮ್ಮ ಚೀನದಲ್ಲಿ, ಬಹಳ ಆಶ್ಚರ್ಯಕರವಾದ ಒಂದು ಹಕ್ಕಿಯಿದೆಯಂತೆ. ಅದು ನನ್ನ ರಾಜ್ಯದ ಮಿಕ್ಕ ಎಲ್ಲಾ ವಸ್ತುಗಳಿಗಿಂತ ಉತ್ತಮವಾದುದೆಂದು ಇವರು ಹೇಳುತ್ತಾರೆ. ಇದರ ವಿಚಾರವಾಗಿ ನನಗೆ ಯಾರೂ ಏನನ್ನೂ ಹೇಳಿಯೇ ಇಲ್ಲ. ಕಾರಣವೇನು?" ಎಂದ.

ಅಧಿಕಾರಿ "ನಾನು ಅದರ ಹೆಸರನ್ನು ಕೂಡ ಕೇಳಿಲ್ಲ. ಅದು ಆಸ್ಥಾನಕ್ಕೆ ಎಂದೂ ಬಂದಿರಲಿಲ್ಲ" ಎಂದ

ಚಕ್ರವರ್ತಿ "ಅದು ಈ ದಿನ ಸಾಯಂಕಾಲವೇ ಇಲ್ಲಿಗೆ ಬಂದು ನನ್ನ ಎದುರಿಗೆ ಹಾಡಬೇಕೆಂಬುದು ನನ್ನ ಅಪೇಕ್ಷೆ. ನನ್ನ ಹತ್ತಿರ ಎಂತಹ ಅಮೂಲ್ಯವಾದ ವಸ್ತುವಿದೆಯೆಂದು ಇಡೀ ಜಗತ್ತಿಗೇ ಗೊತ್ತಿದೆ. ಆದರೂ ಆ ವಿಷಯ ನನಗೇ ಗೊತ್ತಿಲ್ಲ. ಎಷ್ಟು ನಾಚಿಗೆಗೇಡು!" ಎಂದ

ಅಧಿಕಾರಿ "ನಾನು ಇಲ್ಲಿಯವರೆಗೆ ಅದರ ಹೆಸರನ್ನೇ ಕೇಳಿಲ್ಲವಾದರೂ ಚಿಂತೆಯಿಲ್ಲ. ಅದನ್ನು ಹುಡುಕಿ ಪತ್ತೆ ಮಾಡುತ್ತೇನೆ" ಎಂದು ಹೊರಟ. ಆದರೆ ಅದು ಅವನಿಗೆ ಎಲ್ಲಿ ಸಿಕ್ಕಬೇಕು? ಅವನು ಅರಮನೆಯ ಮೇಲಕ್ಕೂ ಕೆಳಕ್ಕೂ, ಒಳಕ್ಕೂ ಹೊರಕ್ಕೂ ಓಡಾಡಿ ಕೊಠಡಿಗಳಲ್ಲಿಯೂ ಕೈಸಾಲೆಗಳಲ್ಲಿಯೂ ಆತುರದಿಂದ ಅಲೆದಾಡಿದ. ಅವನ ಎದುರಿಗೆ ಬಂದವರಾರೂ ಕೋಗಿಲೆಯ ಸಮಾಚಾರವನ್ನೇ ಕೇಳಿರಲಿಲ್ಲ. ಆದ್ದರಿಂದ ಅಧಿಕಾರಿ ಚಕ್ರವರ್ತಿಯ ಬಳಿಗೆ ಮತ್ತೊಮ್ಮೆ ಓಡಿಹೋಗಿ, "ಇದೆಲ್ಲವೂ ಆ ಪುಸ್ತಕಗಳನ್ನು ಬರೆವವರು ಕಲ್ಪಿಸಿದ ಕಟ್ಟುಕತೆ" ಎಂದು ಹೇಳಿದ. "ಆ ಬರೆವಣಿಗೆಯಲ್ಲಿ ಕಂಡು ಬಂದುದನ್ನೆಲ್ಲಾ ಮಹಾ ಪ್ರಭುಗಳು ನಂಬಬಾರದು. ಎಷ್ಟೋ ಪುಸ್ತಕಗಳು ಯಕ್ಷಿಣಿ ವಿದ್ಯೆಯ ಪರಿಣಾಮವೆನ್ನಬೇಕು. ಅವು ಅನೇಕ ವೇಳೆ ಬರಿಯ ಕಲ್ಪನೆಯ ಕಂತೆಗಳಾಗಿರುತ್ತವೆ" ಎಂದ.

ಅದಕ್ಕೆ ಚಕ್ರವರ್ತಿ "ಆ ಕೋಗಿಲೆಯ ವಿಚಾರವಾಗಿ ನಾನು ಓದಿದ ಪುಸ್ತಕ ವೀರಾಧಿವೀರನಾದ ಜಪಾನಿನ ಚಕ್ರವರ್ತಿಯಿಂದ ನನಗೆ ಕಾಣಿಕೆಯಾಗಿ ಬಂದದ್ದು. ಆದ್ದರಿಂದ ಅದು ಎಂದಿಗೂ ಸುಳ್ಳಿರಲಾರದು. ನಾನು ಈ

ಕೋಗಿಲೆಯ ಹಾಡನ್ನು ಕೇಳಲೇಬೇಕು. ಅದನ್ನು ಈ ದಿನ ಇಲ್ಲಿಗೆ ತರಲೇ ಬೇಕೆಂದು ನಾನು ಆಜ್ಞೆ ಮಾಡುತ್ತೇನೆ. ನಾನು ನನ್ನ ಕರುಣಾಮಯವಾದ ರಕ್ಷಣೆಯನ್ನು ಅದಕ್ಕೆ ದಯಪಾಲಿಸಬೇಕು. ಅದು ಸಂಜೆಯ ಹೊತ್ತಿಗೆ ಇಲ್ಲಿಗೆ ಬಂದಿರಬೇಕು. ಇಲ್ಲದಿದ್ದರೆ ರಾತ್ರಿ ಊಟವಾದ ನಂತರ ಆಸ್ಥಾನದ ಜನರನ್ನೆಲ್ಲಾ ಆನೆಯ ಕಾಲ ಕೆಳಗೆ ತುಳಿಸಿಹಾಕಿ ಬಿಡುವೆನು" ಎಂದು ಬಹಳ ಕಟುವಾಗಿ ಹೇಳಿದ.

ಅಧಿಕಾರಿ "ಇದೆಲ್ಲಿ ಬಂತು, ಈ ಗ್ರಹಚಾರ!" ಎಂದುಕೊಂಡು ಮತ್ತೆ ಕೊಠಡಿಗಳಲ್ಲೂ ಕೈಸಾಲೆಗಳ ಕೆಳಗೂ ಒಳಗೂ ಹೊರಗೂ ಓಡಾಡ ತೊಡಗಿದ. ಆಸ್ಥಾನದ ಅರ್ಧ ಜನರೆಲ್ಲಾ ಅವನ ಜೊತೆಯಲ್ಲಿ ಓಡಾಡಿದರು. ಆನೆಯ ಕಾಲ ಕೆಳಗೆ ತುಳಿಸಿಕೊಳ್ಳಬೇಕೆಂದು ಅವರಲ್ಲಿ ಯಾರಿಗೂ ಇಷ್ಟವಿರಲಿಲ್ಲ. ಜಗತ್ತಿಗೆಲ್ಲಾ ಗೊತ್ತಿದ್ದರೂ ಆಸ್ಥಾನದ ತಮಗೇ ಗೊತ್ತಿಲ್ಲದ ಈ ಕೋಗಿಲೆಯನ್ನು ಕುರಿತು ಸಿಕ್ಕವರನ್ನೆಲ್ಲಾ ಕೇಳಿದರು. ಕೊನೆಗೆ ಅವರ ಅಡುಗೆಯ ಮನೆಯಲ್ಲಿ ಒಬ್ಬ ಹುಡುಗಿ "ಓಹೋ! ಕೋಗಿಲೆಯೆ? ನಾನು ಅದನ್ನು ಚೆನ್ನಾಗಿ ಬಲ್ಲೆ. ಹೌದು, ಅದು ನಿಜವಾಗಿಯೂ ಚೆನ್ನಾಗಿ ಹಾಡಬಲ್ಲದು. ಪ್ರತಿದಿನ ಸಾಯಂಕಾಲ ನಾನು ನನ್ನ ತಾಯಿಗೆ ಅನ್ನ ಒಯ್ಯುತ್ತೇನೆ. ಆಕೆ ಸಮುದ್ರ ತೀರದಲ್ಲಿ ವಾಸಿಸುತ್ತಾಳೆ. ನಾನು ಹಿಂದಿರುಗಿ ಬರುವಾಗ ಆಯಾಸವಾದರೆ ಕಾಡಿನಲ್ಲಿ ಸ್ವಲ್ಪ ವಿಶ್ರಮಿಸಿ ಕೊಳ್ಳುತ್ತೇನೆ. ಆಗ ಕೋಗಿಲೆ ಹಾಡುವುದು ನನಗೆ ಕೇಳಿ ಬರುತ್ತದೆ. ಅದರ ಹಾಡು ಕೇಳಿ ನನ್ನ ಕಣ್ಣುಗಳಲ್ಲಿ ನೀರು ಬರುತ್ತವೆ. ಆಗ ನನಗೆ ನನ್ನ ತಾಯಿ ನನ್ನನ್ನು ಮುತ್ತಿಡುತ್ತಿರುವ ಹಾಗಾಗುತ್ತದೆ" ಎಂದು ಹೇಳಿದಳು.

ಆಸ್ಥಾನದ ಅಧಿಕಾರಿ "ಎಲೇ ಅಡುಗೆಮನೆಯ ಪುಟ್ಟ ಹುಡುಗಿ, ನಾನು ನಿನಗೆ ಅಡುಗೆ ಮನೆಯಲ್ಲಿ ಒಳ್ಳೆಯ ಕೆಲಸ ಕೊಡಿಸುತ್ತೇನೆ. ಚಕ್ರವರ್ತಿ ಊಟ ಮಾಡುತ್ತಿರುವಾಗ ಆತನನ್ನು ನೋಡುವುದಕ್ಕೆ ನಿನಗೆ ಅನುಮತಿ ಕೊಡುತ್ತೇನೆ. ನೀನು ನಮ್ಮನ್ನು ಆ ಕೋಗಿಲೆಯ ಬಳಿಗೆ ಕರೆದು ಕೊಂಡು ಹೋಗು. ಅದು ಈ ದಿನ ರಾತ್ರಿ ಆಸ್ಥಾನಕ್ಕೆ ಬರಬೇಕೆಂದು ಅರಸರ ಅಪ್ಪಣೆಯಾಗಿದೆ" ಎಂದ.

ಅವರೆಲ್ಲರೂ ಕೋಗಿಲೆ ಕುಳಿತು ಹಾಡುತ್ತಿದ್ದ ಕಾಡಿಗೆ ಹೋದರು. ಆಸ್ಥಾನದ ಅರ್ಧಜನವೇ ಅಲ್ಲಿತ್ತು. ಅವರು ವೇಗವಾಗಿ ಹೋಗುತ್ತಿರುವಾಗ ದಾರಿಯಲ್ಲಿ ಒಂದು ಹಸು "ಅಂಬಾ" ಎಂದು ಕೂಗಿತು.

ಒಬ್ಬ ತರುಣ ಆಸ್ಥಾನಿಕ "ಓ! ಅಗೋ, ಅದು ಅಲ್ಲಿದೆ! ಇಷ್ಟು ಸಣ್ಣಪ್ರಾಣಿಗೆ ಎಷ್ಟು ಆಶ್ಚರ್ಯಕರವಾದ ಶಕ್ತಿ! ನಾನು ಅದರ ಧ್ವನಿಯನ್ನು ಹಿಂದೆ ಒಮ್ಮೆ ಕೇಳಿದ್ದೇನೆ, ಖಂಡಿತ!" ಎಂದ.

"ಅಲ್ಲ, ಅವು ಆಕಳುಗಳು. ನಾವು ಕೋಗಿಲೆಯಿರುವ ಸ್ಥಳದಿಂದ ಇನ್ನೂ ಬಹಳ ದೂರವಿದ್ದೇವೆ" ಎಂದು ಆ ಹುಡುಗಿ ಹೇಳಿದಳು. ಅನಂತರ ಒಂದು ನೀರಿನ ಮಡುವಿನಲ್ಲಿ ಕಪ್ಪೆಗಳು ವಟಗುಟ್ಟಲು ಆರಂಭಿಸಿದವು.

ರಾಜಪುರೋಹಿತ "ಸೊಗಸಾಗಿದೆ; ಆಹಾ, ಅದರ ಧ್ವನಿ ದೇವಸ್ಥಾನದ ಗಂಟೆಗಳ ಧ್ವನಿಯಂತೆಯೇ ಮಧುರವಾಗಿದೆ" ಎಂದ.

ಹುಡುಗಿ "ಅಲ್ಲ, ಅವು ಕಪ್ಪೆಗಳು! ಇನ್ನೂ ಸ್ವಲ್ಪ ಹೊತ್ತು ನಡೆದರೆ ಕೋಗಿಲೆಯ ಕಂಠಕೇಳಿ ಬರುತ್ತದೆ" ಎಂದಳು.

ಆಗ ಕೋಗಿಲೆ ಹಾಡತೊಡಗಿತು.

ಹುಡುಗಿ "ಆಗೋ ಅಲ್ಲಿದೆ! ಕೇಳಿ! ಕೇಳಿ! ಅಲ್ಲಿ ಕುಳಿತಿದೆ ನೋಡಿ!" ಎಂದು ಮರದ ತಳಿರಿನ ಮಧ್ಯೆ ಕೊಂಬೆಯ ಮೇಲಿದ್ದ ಒಂದು ಪುಟ್ಟ ಕರಿಯ ಹಕ್ಕಿಯನ್ನು ತೋರಿಸಿದಳು.

ಆಸ್ಥಾನದ ಅಧಿಕಾರಿ "ಏನು? ಕೋಗಿಲೆ ಹೀಗೆಯೇ ಇರುವುದು? ಅಂತಹ ಉತ್ಕೃಷ್ಟವಾದ ಹಕ್ಕಿಗೆ ಇಷ್ಟು ಸಾಮಾನ್ಯವಾದ ರೂಪವೆಂದು ನಾನೆಂದಿಗೂ ಎಣಿಸಿರಲಿಲ್ಲ. ಇಷ್ಟು ಮಂದಿ ನಮ್ಮಂತಹ ಘನವಂತರಾದ ಮಹಾ ಪುರುಷರನ್ನು ನೋಡಿ ಅದರ ಬಣ್ಣದ ಗರಿಗಳೆಲ್ಲಾ ಹಾರಿಹೋಗಿರಬೇಕು" ಎಂದ.

ಅಡುಗೆ ಮನೆಯ ಹುಡುಗಿ "ಓ ಪುಟ್ಟಕೋಗಿಲೆ! ನೀನು ತಮ್ಮ ಎದುರಿಗೆ ಬಂದು ಹಾಡಬೇಕೆಂದು ನಮ್ಮ ಚಕ್ರವರ್ತಿಯವರು ಅಪೇಕ್ಷಿಸುತ್ತಾರೆ" ಎಂದು ಗಟ್ಟಿಯಾಗಿ ಕೂಗಿದಳು.

"ಬಹಳ ಸಂತೋಷ" ಎಂದು ಕೋಗಿಲೆ ಸೊಗಸಾಗಿ ಉತ್ತರಕೊಟ್ಟಿತು.

ಆಸ್ಥಾನದ ಅಧಿಕಾರಿ "ಇದರ ಕೊರಲು ಹರಳಿನ ಗಂಟೆಗಳ ಹಾಗಿದೆ. ಆಹಾ! ಎಷ್ಟು ಮಧುರವಾಗಿ ಮಾತಾಡುತ್ತದೆ! ನಾವು ಇದರ ವಿಷಯವನ್ನು ಇಷ್ಟು ದಿನಗಳವರೆಗೂ ಕೇಳದೇ ಇದ್ದುದು ನಿಜವಾಗಿಯೂ ಆಶ್ಚರ್ಯ! ಇದು ಆಸ್ಥಾನದಲ್ಲಿ ಬಹಳ ಯಶಸ್ವಿಯಾಗುವುದೆಂದು ನನಗೆ ಗೊತ್ತು!" ಎಂದ.

ಕೋಗಿಲೆ ಚಕ್ರವರ್ತಿ ತಾನೇ ಅಲ್ಲಿಗೆ ಬಂದಿರುವನೆಂದುಕೊಂಡು "ಪ್ರಭುಗಳಿಗೋಸ್ಕರ ನಾನು ಇನ್ನೊಮ್ಮೆ ಹಾಡಲೆ?" ಎಂದು ಕೇಳಿತು.

ಆಸ್ಥಾನದ ಅಧಿಕಾರಿ "ಅಮೂಲ್ಯವಾದ ಪುಟ್ಟಕೋಗಿಲೆ, ನಿನ್ನನ್ನು ಇಂದಿನ ರಾತ್ರಿ ಆಸ್ಥಾನದ ಉತ್ಸವವೊಂದಕ್ಕೆ ಆಹ್ವಾನಿಸುವ ಗೌರವ ನನ್ನ ಪಾಲಿಗೆ ಬಂದಿದೆ ಅಲ್ಲಿ ನೀನು ನಿನ್ನ ಸುಮಧುರವಾದ ಸಂಗೀತದಿಂದ ಸಾರ್ವಭೌಮರ ಮನಸ್ಸನ್ನು ತೃಪ್ತಿಗೊಳಿಸಬಹುದು" ಎಂದು ಉತ್ತರಕೊಟ್ಟ.

ಕೋಗಿಲೆ "ನನ್ನ ಹಾಡು ಮರಗಳ ಮಧ್ಯೆ ಆದರೆ ಬಹಳ ಚೆನ್ನಾಗಿರುತ್ತದೆ" ಎಂದಿತು, ಆದರೂ ಚಕ್ರವರ್ತಿ ತನ್ನ ಬರುವಿಕೆಯನ್ನೇ ಹಾರೈಸಿ ನಿರೀಕ್ಷಿಸುತ್ತಿದ್ದನೆಂದು ಕೇಳಿದ ಕೂಡಲೆ, ಅದು ಆಸ್ಥಾನಿಕರೊಡನೆ ಅರಮನೆಗೆ ಹೊರಟಿತು.

ಅರಮನೆಯನ್ನು ಆ ಉತ್ಸವಕ್ಕಾಗಿ ಅಲಂಕರಿಸಿದ್ದರು. ಚೀನಾ ದೇಶದ ಮಣ್ಣಿನ ನಯವಾದ ನೆಲವೂ ಗೋಡೆಗಳೂ ಸಾವಿರಾರು ಹೊನ್ನಿನ ಹಣತೆಗಳ ಬೆಳಕಿನಲ್ಲಿ ಹೊಳೆಯುತ್ತಿದ್ದವು. ಕೈಸಾಲೆಗಳಲ್ಲಿ ಗಂಟೆಗಳಂತೆ ಧ್ವನಿ ಮಾಡುತ್ತಿದ್ದ ಅತ್ಯಂತ ಸುಂದರವಾದ ಹೂಗಳನ್ನು ಸಾಲಾಗಿಟ್ಟು ಸಿಂಗರಿಸಿದ್ದರು, ಜನಗಳು ಅತ್ತಿಂದಿತ್ತ ಓಡಾಡುವ ಗಲಭೆ ಬಹಳವಾಗಿತ್ತು. ಗಂಟೆಗಳ ಝಣಝಣ ಶಬ್ದದಿಂದ ಎಲ್ಲರ ಕಿವಿಗಳೂ ತುಂಬಿಹೋಗಿದ್ದವು. ಆಸ್ಥಾನ ಮಂಟಪದ ಮಧ್ಯಭಾಗದಲ್ಲಿ, ಚಕ್ರವರ್ತಿ ಕುಳಿತುಕೊಳ್ಳುವ ಕಡೆ, ಚಿನ್ನದ ಕಂಬಿಯೊಂದನ್ನು ನೇತುಹಾಕಿದ್ದರು. ಕೋಗಿಲೆ ಅದರ ಮೇಲೆ ಕುಳಿತು ಹಾಡಬೇಕಾಗಿತ್ತು. ಆಸ್ಥಾನಿಕರೆಲ್ಲರೂ ನೆರೆದಿದ್ದರು. ಅಡುಗೆ ಮನೆಯ ಬಡ ಹುಡುಗಿಯೂ ಬಾಗಿಲ ಹಿಂದೆ ಬಂದು ನಿಲ್ಲಲು ಅನುಮತಿಯನ್ನು ಹೊಂದಿದ್ದಳು. ಅವಳನ್ನು ಈಗ ರಾಜನ ಊಟ ಉಪಚಾರಗಳ ಮೇಲ್ವಿಚಾರಣೆಗೆ

ನೇಮಿಸಿಬಿಟ್ಟಿದ್ದರು. ಎಲ್ಲರೂ ತಮ್ಮ ತಮ್ಮ ಅತ್ಯುತ್ತಮವಾದ ಉಡಿಗೆ ತೊಡಿಗೆಗಳನ್ನು ಧರಿಸಿದ್ದರು. ಚಕ್ರವರ್ತಿ ನೋಡಿ ತಲೆದೂಗುತ್ತಿದ್ದ ಪುಟ್ಟ ಕರಿಯ ಹಕ್ಕಿಯ ಕಡೆಗೆ ಎಲ್ಲರ ಕಣ್ಣುಗಳೂ ತಿರುಗಿದ್ದವು. ಕೋಗಿಲೆ ಮನೋಹರವಾಗಿ ಹಾಡಿತು. ಚಕ್ರವರ್ತಿಯ ಕಣ್ಣುಗಳಲ್ಲಿ ನೀರುಬಂತು. ಅವನ ಕೆನ್ನೆಗಳ ಮೇಲೆ ಕಂಬನಿ ಉರುಳಿದವು. ಅದನ್ನು ನೋಡಿ ಕೋಗಿಲೆ ಮೊದಲಿಗಿಂತಲೂ ಹೆಚ್ಚು ಸೊಗಸಾಗಿ ಹಾಡಿತು. ಅದರ ಧ್ವನಿಯ ಮಾಧುರ್ಯ ಎಲ್ಲರ ಹೃದಯಗಳನ್ನೂ ಹೊಕ್ಕಿತು. ಚಕ್ರವರ್ತಿಯ ಆನಂದಕ್ಕೆ ಪಾರವೇ ಇರಲಿಲ್ಲ. ತನ್ನ ಚಿನ್ನದ ಹಾರ ಕೋಗಿಲೆಯ ಕೊರಳಿನ ಸುತ್ತಲೂ ಇರತಕ್ಕು ದೆಂದು ಹೇಳಿ, ಅದನ್ನು ಹೊಗಳಿ ಬಹುಮಾನಿಸಹೋದನು. ಆದರೆ ಕೋಗಿಲೆ ವಿನಯಪೂರ್ವಕವಾಗಿ ಅಂತಹ ಬಹುಮಾನ ತನಗೆ ಬೇಡವೆಂದಿತು. ಅದಕ್ಕೆ ಬೇಕಾದಷ್ಟು ಬಹುಮಾನ ಆಗಲೇ ಬಂದಿತ್ತು.

"ಚಕ್ರವರ್ತಿಯ ಕಣ್ಣುಗಳಲ್ಲಿ ನೀರು ಬಂದುದನ್ನು ನಾನು ನೋಡಿ ದ್ದೇನೆ. ಅದೇ ನನಗೆ ಅತ್ಯಂತ ಬೆಲೆ ಬಾಳುವ ಬಹುಮಾನ. ಚಕ್ರವರ್ತಿಯ ಕಂಬನಿಗಳಿಗೆ ಅತ್ಯಾಶ್ಚರ್ಯಕರವಾದ ಶಕ್ತಿಯಿದೆ! ನನಗೆ ಸಾಕಾದಷ್ಟು ಸಂಭಾವನೆ ದೊರೆತಿದೆಯೆಂದು ದೇವರಿಗೆ ಗೊತ್ತು!" ಎಂದು ಹೇಳಿ ಅದು ಮತ್ತೊಂದು ಸಾರಿ ತನ್ನ ಮೃದುಮಧುರವಾದ ಸ್ವರ್ಗೀಯವಾದ ಸಂಗೀತ ವನ್ನು ಹಾಡತೊಡಗಿತು.

ಆಸ್ಥಾನದ ಮಹಿಳೆಯರು "ನಾವು ಕೇಳಿರುವ ಪ್ರಣಯಗೀತೆಗಳ ಲ್ಲೆಲ್ಲಾ ಇದೇ ಅತ್ಯುತ್ತಮವಾದುದು" ಎಂದರು. ಅವರು ತಮ್ಮ ಬಾಯಿಗ ಳಲ್ಲಿ ಸ್ವಲ್ಪ ನೀರನ್ನು ಹಾಕಿಕೊಂಡು ತಾವು ಮಾತಾಡುವಾಗ ಕೋಗಿಲೆ ಯಂತೆಯೇ ಗಳಗಳನೆ ಇಂಪಾದ ಧ್ವನಿಯನ್ನು ಹೊರಡಿಸಲು ಪ್ರಯತ್ನಿ ಸಿದರು. ಕೆಳದರ್ಜೆಯ ಸೇವಕರು ಕೂಡ ತಮಗೆ ಬಹಳ ತೃಪ್ತಿಯಾಯಿ ತೆಂದು ಹೇಳಿದರು. ಈ ಸೇವಕರು ಹೊಗಳಿದರೆಂದರೆ ಇತರ ಎಲ್ಲರೂ ಹೊಗಳಿ ದಂತೆಯೇ ಎನ್ನಬೇಕು. ಏಕೆಂದರೆ ಅವರನ್ನು ತೃಪ್ತಿಪಡಿಸುವುದೇ ಅತ್ಯಂತ ಕಷ್ಟವಾದ ಕೆಲಸ. ಕೋಗಿಲೆ ಎಲ್ಲ ಕಡೆಯೂ ಒಂದು ವಿಧವಾದ ಉದ್ರೇಕ ವನ್ನೇ ಉಂಟುಮಾಡಿತ್ತು. ಈಗ ಅದು ಆಸ್ಥಾನದಲ್ಲೇ ಇರಬೇಕಾಯಿತು. ಅದಕ್ಕೆ ಪ್ರತ್ಯೇಕವಾದ ಪಂಜರವನ್ನು ನಿರ್ಮಿಸಿದರು. ಹಗಲು ಹೊತ್ತಿನಲ್ಲಿ

ಎರಡು ಸಾರಿ, ರಾತ್ರಿ ಒಂದು ಸಾರಿ ಹೊರಗೆ ನಡೆದು ಹೋಗುವ ಸ್ವಾತಂತ್ರ್ಯ ಅದಕ್ಕಿತ್ತು. ಅದು ಹೀಗೆ ಹೋದಾಗಲೆಲ್ಲಾ ಅದರೊಡನೆ ಹನ್ನೆರಡು ಜನ ಊಳಿಗದವರು ಇರುತ್ತಿದ್ದರು. ಅವರಲ್ಲಿ ಪ್ರತಿಯೊಬ್ಬನೂ ಒಂದು ರೇಷ್ಮೆಯ ದಾರವನ್ನು ಹಿಡಿದಿರುತ್ತಿದ್ದ. ಈ ದಾರಗಳೆಲ್ಲವನ್ನೂ ಅದರ ಕಾಲಿಗೆ ಕಟ್ಟಿರುತ್ತಿದ್ದರು. ಆದರೆ ಹೀಗೆ ಬಂದಿಯ ಹಾಗೆ ನಡೆದು ಹೋಗುವುದರಲ್ಲಿ ಕೋಗಿಲೆಗೆ ಯಾವ ಸಂತೋಷವೂ ಇರಲಿಲ್ಲ.

ಪಟ್ಟಣಕ್ಕೆ ಪಟ್ಟಣವೇ ಈ ಅದ್ಭುತವಾದ ಹಕ್ಕಿಯ ವಿಚಾರವಾಗಿ ಮಾತಾಡಿಕೊಳ್ಳುತ್ತಿತ್ತು. ಇಬ್ಬರು ದಾರಿಯಲ್ಲಿ ಸೇರಿದರೆ ಒಬ್ಬ "ಕೋ" ಎನ್ನುತ್ತಿದ್ದ, ಇನ್ನೊಬ್ಬ "ಗಿಲೆ" ಎಂದು ಉತ್ತರಕೊಡುತ್ತಿದ್ದ. ಆ ಮೇಲೆ ಇಬ್ಬರೂ ಅದರ ಅರ್ಥವನ್ನು ಗ್ರಹಿಸಿ ನಿಟ್ಟುಸಿರುಬಿಡುತ್ತಿದ್ದರು. ಹನ್ನೊಂದು ಮಂದಿ ಗೌಳಿಗರ ಮಕ್ಕಳಿಗೆ "ಕೋಗಿಲೆ" ಎಂದು ಹೆಸರಿಟ್ಟರು. ಆದರೆ ಅವರಲ್ಲಿ ಒಬ್ಬನಿಗಾದರೂ ಅದರ ಕಂಠ ಮಾತ್ರ ಇರಲಿಲ್ಲ.

ಒಂದು ದಿನ ಚಕ್ರವರ್ತಿಗೆ ಯಾರೋ ಒಂದು ಪೆಟ್ಟಿಗೆ ಕಳುಹಿಸಿದರು. ಅದರ ಮೇಲೆ "ಕೋಗಿಲೆ" ಎಂಬ ಬರಹವಿತ್ತು.

ಚಕ್ರವರ್ತಿ "ಇದು ನಮ್ಮ ಪ್ರಸಿದ್ಧವಾದ ಪಕ್ಷಿಯನ್ನು ವರ್ಣಿಸುವ ಮತ್ತೊಂದು ಹೊಸ ಪುಸ್ತಕವಿರಬಹುದು" ಎಂದ. ಆದರೆ ಅದು ಪುಸ್ತಕವಾಗಿರಲಿಲ್ಲ. ಆ ಪೆಟ್ಟಿಗೆಯಲ್ಲಿದ್ದುದು ಒಂದು ಕೃತಕವಾದ ಕೋಗಿಲೆ. ಅದು ಎಲ್ಲ ರೀತಿಗಳಲ್ಲಿಯೂ ಬದುಕಿದ ಕೋಗಿಲೆಯ ಹಾಗೆಯೇ ಇತ್ತು. ಆದರೆ ಅದರ ಮೈಯನ್ನೆಲ್ಲಾ ವಜ್ರವೈಢೂರ್ಯಗಳಿಂದಲೂ ಮುತ್ತುರತ್ನಗಳಿಂದಲೂ ಅಲಂಕರಿಸಿದ್ದರು.

ಈ ಕೃತವಾದ ಹಕ್ಕಿಗೆ ಒಂದು ಕೀಲಿ ಸಿಕ್ಕಿಸಿದ್ದರು. ಅದನ್ನು ತಿರುಗಿಸಿದಾಗ ಅದು ನಿಜವಾದ ಕೋಗಿಲೆ ಹಾಡುತ್ತಿದ್ದ ಒಂದು ಹಾಡನ್ನು ಹಾಡಿ, ಚಿನ್ನ ಬೆಳ್ಳಿಗಳಿಂದ ಥಳಥಳಿಸುತ್ತಿದ್ದ ತನ್ನ ಬಾಲವನ್ನು ಮೇಲಕ್ಕೂ ಕೆಳಕ್ಕೂ ಅಲ್ಲಾಡಿಸುತ್ತಿತ್ತು. ಅದರ ಕತ್ತಿನ ಸುತ್ತಲೂ ರೇಷ್ಮೆಯ ಪಟ್ಟಿಯೊಂದನ್ನು ಕಟ್ಟಿದ್ದರು. ಆ ಪಟ್ಟಿಯ ಮೇಲೆ "ಜಪಾನ್ ಚಕ್ರವರ್ತಿಯ ಕೋಗಿಲೆಯೊಡನೆ ಹೋಲಿಸಿ ನೋಡಿದರೆ ಚೀನಾ ಚಕ್ರವರ್ತಿಯ ಕೋಗಿಲೆ ಕೆಲಸಕ್ಕೆ ಬಾರದ ವಸ್ತು" ಎಂಬುದಾಗಿ ಬರೆದಿತ್ತು.

ಎಲ್ಲರೂ "ಆಹಾ, ಎಷ್ಟು ಚೆನ್ನಾಗಿದೆ!" ಎಂದರು. ಆ ಕೃತಕ ಪಕ್ಷಿಯನ್ನು ತಂದವನಿಗೆ ಕೂಡಲೇ "ಚಕ್ರವರ್ತಿ ಸಾರ್ವಭೌಮನಿಗೆ ಕೋಗಿಲೆಯನ್ನು ತಂದುಕೊಟ್ಟ ದೊಡ್ಡ ಮನುಷ್ಯ" ಎಂಬ ಬಿರುದು ದೊರೆಯಿತು.

"ಈಗ ಇವೆರಡೂ ಒಟ್ಟಿಗೆ ಹಾಡಿದರೆ ಎಂತಹ ಮೇಳವಾಗುತ್ತದೆ!" ಎಂದು ಚಕ್ರವರ್ತಿಯ ಅಪ್ಪಣೆಯಾಯಿತು.

ಆಗ ಅವೆರಡೂ ಒಟ್ಟಿಗೆ ಹಾಡಬೇಕಾಯಿತು. ಆದರೆ ಅವುಗಳ ಮೇಳ ಸರಿಹೋಗಲಿಲ್ಲ. ಏಕೆಂದರೆ ನಿಜವಾದ ಕೋಗಿಲೆ ಬೇರೆ ಬೇರೆಯ ಹಾಡುಗಳನ್ನು ಸ್ವೇಚ್ಛೆಯಾಗಿ ಹಾಡುತ್ತಿತ್ತು; ಕೃತಕವಾದ ಕೋಗಿಲೆಗೆ ಬರುತ್ತಿದ್ದುದು ಒಂದೇ ಒಂದು ರೀತಿಯ ಹಾಡು ಮಾತ್ರ.

ಆ ಸ್ಥಾನದ ಪ್ರಮುಖ ಸಂಗೀತ ವಿದ್ವಾಂಸ "ಅದರಲ್ಲಿ ಏನೂ ತಪ್ಪಿಲ್ಲ; ಅದು ಕಾಲಕ್ಕೆ ತಕ್ಕಂತೆ ಎಲ್ಲಾ ವಿಧದಲ್ಲಿಯೂ ಸರಿಯಾಗಿ ಹಾಡುತ್ತದೆ!" ಎಂದು ಬಿಟ್ಟ.

ಇದಾದನಂತರ ಕೃತಕ ಪಕ್ಷಿ ತಾನೇ ಬೇರೆಯಾಗಿ ಹಾಡಬೇಕಾಯಿತು, ಅದು ನಿಜವಾದ ಹಕ್ಕಿಯಂತೆಯೇ ಚೆನ್ನಾಗಿ ಹಾಡಿತು. ಅಷ್ಟೇ ಅಲ್ಲ, ಜೀವವುಳ್ಳ ಕೋಗಿಲೆಗಿಂತಲೂ ನೋಡುವುದಕ್ಕೆ ಹೆಚ್ಚು ಸುಂದರವಾಗಿ ಕಾಣುತ್ತಿತ್ತು; ಕೈ ಬಳೆಗಳಂತೆ, ಕೊರಳ ಹಾರಗಳಂತೆ ಥಳಥಳಿಸುತ್ತಿತ್ತು.

ಹೊಸ ಹಕ್ಕಿ ಒಂದೇ ಹಾಡನ್ನೇ ಮೂವತ್ತುನಾಲ್ಕು ಬಾರಿ ಮತ್ತೆಮತ್ತೆ ಹಾಡಿತು. ಆದರೂ ಅದಕ್ಕೆ ಬೇಸರವಾಗಲಿ ಆಯಾಸವಾಗಲಿ ಆಗಲಿಲ್ಲ. ಜನಗಳು ಅದರ ಹಾಡನ್ನು ಮತ್ತೆ ಮೊದಲಿನಿಂದ ಕೇಳಲು ಆಸೆಪಟ್ಟರು. ಆದರೆ ಚಕ್ರವರ್ತಿ ಹಳೆಯ ಹಕ್ಕಿಗೂ ಒಂದು ಸರದಿ ಬರಬೇಕೆಂದು ಹೇಳಿದ. ಆದರೆ ಅದು ಎಲ್ಲಿ? ತೆರೆದಿದ್ದ ಕಿಟಕಿಯ ಮೂಲಕ ಹೊರಗೆ ಹೊರಟು ತನ್ನ ಹಸುರು ವನಗಳಿಗೆ ಹಾರಿಹೋಗಿತ್ತು. ಅದನ್ನು ಯಾರೂ ಗಮನಿಸಿರಲಿಲ್ಲ.

ಚಕ್ರವರ್ತಿ "ಇದೇನು ಅಪಚಾರ!? ಎಂದ.

ಆಸ್ಥಾನಿಕರೆಲ್ಲರೂ ಅದನ್ನು ಬಾಯಿಗೆ ಬಂದಂತೆ ಬೈದರು! ಉಂಡ ಮನೆಗೆ ಎರಡು ಬಗೆಯುವ ಹಕ್ಕಿಯೆಂದು ದೂಷಿಸಿದರು.

ಕಡಗೆ "ಅದು ಹೋದರೆ ಹೋಗಲಿ. ಅತ್ಯಂತ ಸೊಗಸಾದ ಹಕ್ಕಿ ಈಗ ನಮ್ಮ ಬಳಿ ಇದೆ" ಎಂದರು. ಕೃತಕವಾದ ಕೋಗಿಲೆ ಪುತ್ತೆ ಹಾಡ ಬೇಕಾಯಿತು. ಅವರು ಅದೇ ಹಾಡನ್ನೇ ಮೂವತ್ತು ನಾಲ್ಕು ಬಾರಿ ಕೇಳಿದ್ದರು. ಆದರೂ ಅದು ಪೂರ್ತಿಯಾಗಿ ಅವರ ಬಾಯಿಗೆ ಬರುತ್ತಿರಲಿಲ್ಲ. ಅದು ಅಷ್ಟು ಕಷ್ಟವಾಗಿತ್ತು.

ಸಂಗೀತ ವಿದ್ವಾಂಸ ಆ ಹಕ್ಕಿಯನ್ನು ಬಹಳವಾಗಿ ಹೊಗಳಿದ. "ಹೊರಗಿನ ವಜ್ರಗಳ ವಿಚಾರದಲ್ಲಿ ಮಾತ್ರವಲ್ಲದೆ ಒಳಗೂ ಇದು ನಿಜವಾದ ಕೋಗಿಲೆಗಿಂತ ಸಾವಿರ ಪಾಲು ಉತ್ತಮ" ಎಂದು ಒತ್ತಿ ಒತ್ತಿ ಹೇಳಿದ.

ಅದು ಹೇಗೆ ಉತ್ತಮವೆಂದು ಕೇಳಿದಾಗ ಅವನು, "ಮಹಾಪ್ರಭು, ಮಹಿಳೆಯರೆ ಮತ್ತು ಮಹನೀಯರೆ, ಇದು ಹೇಗೆ ಅದಕ್ಕಿಂತಲೂ ಉತ್ತಮವಾದುದೆಂದು ಕೇಳುವಿರೋ? ಇಗೋ, ಕಾರಣವಿದು—ನಿಜವಾದ ಕೋಗಿಲೆ ಹಾಡುವಾಗ ಮುಂದಿನ ಕ್ಷಣದಲ್ಲಿ ನೀವು ಯಾವ ಹಾಡನ್ನು ಕೇಳುವಿರೋ ಹೇಳಲು ಆಗುತ್ತಿರಲಿಲ್ಲ. ಕೃತಕವಾದ ಕೋಗಿಲೆಯಲ್ಲಾದರೆ ಅದರ ಹಾಡಿನ ಪ್ರತಿಯೊಂದು ರಾಗವೂ ಪ್ರತಿಯೊಂದು ಅಕ್ಷರವೂ ಮೊದಲೇ ನಿರ್ಧರವಾಗಿದೆ! ಅದು ಇರುವುದು ಹೀಗೆ, ಇರಬೇಕಾದುದೂ ಹೀಗೆಯೇ; ಅದು ಇನ್ನಾವ ರೀತಿಯಲ್ಲೂ ಇರಲಾರದು. ನೀವು ಇದರಲ್ಲಿ ಎಲ್ಲದಕ್ಕೂ ಕಾರಣಗಳನ್ನು ಕೊಡಬಹುದು; ಇದನ್ನು ಬಿಚ್ಚಿ ನೋಡಬಹುದು, ವಿಧವಿಧವಾದ ರಾಗಗಳನ್ನು ಕೂಡಿಸುವುದರಲ್ಲಿ ಮನುಷ್ಯ ತೋರಿಸಿರುವ ಬುದ್ಧಿ ಕುಶಲತೆಯನ್ನು ಕಾಣಬಹುದು; ಒಂದು ರಾಗ ಇನ್ನೊಂದರ ಅನಂತರ ಹೇಗೆ ಹೊರಡುತ್ತದೆ ಎಂಬುದನ್ನು ಪರಾಂಬರಿಸಬಹುದು!" ಎಂದ ಉಪನ್ಯಾಸ ಮಾಡಿದ.

ಅಲ್ಲಿದ್ದವರೆಲ್ಲರೂ "ನಮ್ಮ ಅಭಿಪ್ರಾಯವೂ ಅದೇ" ಎಂದು ಬಿಟ್ಟರು. ಸಂಗೀತ ವಿದ್ವಾಂಸ ಮುಂದಿನ ಸೋಮವಾರ ಆ ಹಕ್ಕಿಯನ್ನು ಸಾರ್ವಜನಿಕರಿಗೆ ತೋರಿಸಬಹುದೆಂದು ಅನುಮತಿ ಹೊಂದಿದ. ಚಕ್ರವರ್ತಿ ಜನಗಳೆಲ್ಲರೂ ಅದು ಹಾಡುವುದನ್ನು ಕೇಳಬಹುದೆಂದ. ಜನಗಳೆಲ್ಲರೂ ಆ ಕೃತಕ ಕೋಗಿಲೆಯನ್ನು ನೋಡಿ ಅದು ಹಾಡುವುದನ್ನು ಕೇಳಿದರು. ಅದರಿಂದ ಅವರೆಲ್ಲರಿಗೂ ತುಂಬ ಉತ್ಸಾಹ ಬಂತು. ಅವರಿಗೆ "ಟೀ" ಪಾನ ಮಾಡಿದಷ್ಟು ಸಂತೋಷವಾಯಿತು. "ಟ" ಕುಡಿಯುವುದೆಂದರೆ ಚೀನೀಯರಿಗೆ ಪಂಚ ಪ್ರಾಣ.

ಅವರೆಲ್ಲರೂ "ಆಹಾ" ಎಂದು ಗಾಳಿಯಲ್ಲಿ ಕೈಬೀಸಿ ತಲೆದೂಗಿದರು. ನಿಜವಾದ ಕೋಗಿಲೆಯ ಹಾಡನ್ನು ಕೇಳಿದ್ದ ಬಡ ಬೆಸ್ತ ಮಾತ್ರ "ಇದು ಬಹಳ ಚೆನ್ನಾಗಿದೆ. ಆದರೂ ಬದುಕಿದ ಹಕ್ಕಿಯ ಹಾಡಿನಂತಿಲ್ಲ" ಎಂದ. ನಿಜವಾದ ಕೋಗಿಲೆಗೆ ರಾಜ್ಯದಿಂದ ಗಡೀಪಾರಾಯಿತು.

ಕೃತಕ ಕೋಗಿಲೆಗೆ ಚಕ್ರವರ್ತಿಯ ಹಾಸುಗೆಯ ಸಮೀಪದಲ್ಲಿ ಒಂದು ರೇಷ್ಮೆಯ ಸುಪ್ಪತ್ತಿಗೆಯನ್ನು ಕೊಟ್ಟರು. ಅದಕ್ಕೆ ದೊರೆತಿದ್ದ ಚಿನ್ನ ಬೆಳ್ಳಿಗಳ ಅಮೂಲ್ಯವಾದ ಉಡುಗೊರೆಗಳೆಲ್ಲನ್ನೂ ಅದರ ಸುತ್ತಲೂ ಇಟ್ಟರು. ಅದಕ್ಕೆ "ಸಾರ್ವಭೌಮನ ಶಯ್ಯಾಗೃಹದ ಪ್ರಧಾನ ಸಂಗೀತಗಾರ" ಎಂಬ ಬಿರುದು ಬಂತು. ಅದರ ದರ್ಜೆ ಎಡದ ಕಡೆಯಿಂದ ಮೊದಲನೆಯದಾಗಿತ್ತು. ಏಕೆಂದರೆ ಚಕ್ರವರ್ತಿ ತನ್ನ ಎಡಭಾಗವನ್ನು ಮುಖ್ಯವೆಂದು ಗಣಿಸುತ್ತಿದ್ದ. ಎಡಭಾಗದಲ್ಲಿ ಹೃದಯವಿದೆ; ಚಕ್ರವರ್ತಿಯ ಹೃದಯವೂ ಎಡಭಾಗದಲ್ಲೇ ಇರುತ್ತದೆ. ಸಂಗೀತ ವಿದ್ವಾಂಸ ಆ ಕೃತಕ ಹಕ್ಕಿಯ ಮೇಲೆ ಇಪ್ಪತ್ತೈದು ಸಂಪುಟಗಳ ಗ್ರಂಥವನ್ನು ಬರೆದ. ಪುಸ್ತಕ ಬಹಳ ದೊಡ್ಡದಾಗಿತ್ತು. ಚೀನೀ ಭಾಷೆಯ ಅತ್ಯಂತ ಕಷ್ಟತರವಾದ ಮಾತುಗಳನ್ನು ಅವನು ಅದರಲ್ಲಿ ಪ್ರಯೋಗಿಸಿದ್ದ. ಎಲ್ಲರೂ ಅದು ತಮಗೆ ಅರ್ಥವಾಯಿತೆಂದು ಹೇಳಿದರು. ಇಲ್ಲದಿದ್ದರೆ ಇತರರು ಅವರನ್ನು ಶುಂಠರೆಂದು ಕರೆದು ಬಿಡುತ್ತಿದ್ದರು; ಅವರನ್ನು ನೆಲಕ್ಕೆ ಕೆಡವಿ ತುಳಿದು ಹಾಕುತ್ತಿದ್ದರು.

ಹೀಗೆ ಒಂದು ಇಡೀ ವರ್ಷ ಕಳೆಯಿತು. ಚಕ್ರವರ್ತಿಗೂ ಆಸ್ಥಾನಿಕರಿಗೂ ಇತರ ಎಲ್ಲಾ ಚೀನೀಯರಿಗೂ ಆ ಕೃತಕ ಪಕ್ಷಿಯ ಹಾಡಿನ ಪ್ರತಿಯೊಂದು ರಾಗವೂ ಧ್ವನಿಯೂ ಬಾಯಿಪಾಠವಾಯಿತು. ಆ ಕಾರಣದಿಂದಲೇ ಅವರು ಅದನ್ನು ಇನ್ನೂ ಹೆಚ್ಚಾಗಿ ಪ್ರೀತಿಸುತ್ತಿದ್ದರು. ಏಕೆಂದರೆ ಅವರು ಅದರೊಡನೆ ತಾವೂ ಹಾಡಬಹುದಾಗಿತ್ತು. ಬೀದಿಯ ಹುಡುಗರು ಕೂಡ "ಜಿಜಿಜಿ" ಎಂದೂ "ಕ್ಲಕ್ ಕ್ಲಕ್ ಕ್ಲಕ್" ಎಂದೂ ಹಾಡುತ್ತಿದ್ದರು. ಚಕ್ರವರ್ತಿಯೂ ಹಾಗೇ ಹಾಡುತ್ತಿದ್ದ.

ಒಂದು ದಿನ ಸಾಯಂಕಾಲ ಆ ಹಕ್ಕಿ ಅತ್ಯುತ್ತಮವಾಗಿ ಹಾಡುತ್ತಿತ್ತು. ಚಕ್ರವರ್ತಿ ಹಾಸುಗೆಯಲ್ಲಿ ಮಲಗಿ ಅದನ್ನು ಆಲಿಸುತ್ತಿದ್ದ. ಆಗ ಹಕ್ಕಿಯ ಒಳಗೆ ಏನೋ ಸಡಿಲವಾಗಿ ಕಳಚಿ ಬಿತ್ತು. "ಝೀ" ಎಂದು ಶಬ್ದವಾಯಿತು.

ಆಮೇಲೆ ಯಾವುದೋ ಒಂದು ಕೀಲು "ಕರ್‍ರ್ರ್" ಎಂದು ಮುರಿದು ಹೋಯಿತು. ಚಕ್ರಗಳು ತಿರುಗುವುದೂ ಹಕ್ಕಿ ಹಾಡುವುದೂ ಒಟ್ಟಿಗೆ ನಿಂತು ಹೋಯಿತು. ಚಕ್ರವರ್ತಿ ಹಾಸುಗೆಯಿಂದ ಹೊರಕ್ಕೆ ಹಾರಿ ತನ್ನ ಆಸ್ಥಾನದ ವೈದ್ಯರಿಗೆ ಹೇಳಿಕಳುಹಿಸಿದ. ಆದರೆ ಅವರು ತಾನೆ ಏನು ಮಾಡಬಲ್ಲವರಾಗಿದ್ದರು? ಆನಂತರ ಗಡಿಯಾರ ಸರಿಮಾಡುವವನಿಗೆ ಹೇಳಿಕಳುಹಿಸಿದರು. ಅವನು ಬಂದು ಬಹಳ ಹೊತ್ತನ್ನು ಬರಿಯ ಮಾತಿನಲ್ಲೂ ಮುರಿದ ಹಕ್ಕಿಯನ್ನು ಪರೀಕ್ಷಿಸುವುದರಲ್ಲೂ ಕಳೆದು, ಕಡೆಗೆ ಏನೋ ಪ್ರಯತ್ನ ಪಟ್ಟು ಅದನ್ನು ಮತ್ತೆ ನಡೆಯುವ ಹಾಗೆ ಮಾಡಿದ. ಆದರೆ ಇನ್ನು ಮುಂದೆ ಅವರು ಅವಕ್ಕೆ ಹೆಚ್ಚಿಗೆ ಕೆಲಸ ಕೊಡ ಕೂಡದೆಂದೂ ಅದು ಮೊದಲಿನ ಹಾಗೆ ಹಾಡುವುದು ಖಂಡಿತ ಸಾಧ್ಯವಿಲ್ಲವೆಂದೂ ಹೇಳಿಬಿಟ್ಟ. ಆದರಿಂದ ಎಲ್ಲರಿಗೂ ಬಹಳ ವ್ಯಥೆಯಾಯಿತು. ಕೃತಕ ಪಕ್ಷಿಯ ಬಾಯಿಂದ ಬೇಕು ಬೇಕಾದಾಗಲೆಲ್ಲಾ ಹಾಡು ಹೇಳಿಸುವುದಕ್ಕೆ ಅವರಿಗೆ ಧೈರ್ಯವೇ ಇಲ್ಲದೆ ಹೋಯಿತು. ಅದು ವರ್ಷಕ್ಕೊಮ್ಮೆ ಹಾಡುವಂತಾಯಿತು. ಆಗಲೂ ಕೂಡ ಅದು ಮೊದಲಿನಂತೆ ಸರಿಯಾಗಿ ಹಾಡುತ್ತಿರಲಿಲ್ಲ. ಸಂಗೀತದ ವಿದ್ವಾಂಸ ತಾನು ತಿಳಿದ ಅತ್ಯಂತ ಕಠಿಣವಾದ ಪದಗಳನ್ನೆಲ್ಲಾ ಉಪಯೋಗಿಸಿ ಒಂದು ಸಣ್ಣ ಭಾಷಣ ಮಾಡಿದ. ಅದು ಮೊದಲಿನ ಹಾಗೆಯೇ ಉತ್ತಮ ಸ್ಥಿತಿಯಲ್ಲಿದೆ ಎಂದು ಹೇಳಿದ. ಅವನು ಹಾಗೆ ಹೇಳಿದ ಮೇಲೆ ಇತರರು ಅದನ್ನು ಇಲ್ಲವೆನ್ನಲಾಗುತ್ತಿರಲಿಲ್ಲ. ಎಲ್ಲರೂ ಅದನ್ನೇ ನಿಜವೆಂದು ನಂಬಿದರು.

ಐದು ವರ್ಷವಾಯಿತು. ರಾಜ್ಯಕ್ಕೆ ಒಂದು ದೊಡ್ಡ ದುಃಖವೊದಗಿತು. ಪ್ರಜೆಗಳೆಲ್ಲಾ ತಮ್ಮ ಚಕ್ರವರ್ತಿಯನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಈಗ ಅವನು ಕಾಯಿಲೆ ಮಲಗಿಬಿಟ್ಟಿದ್ದ. ಅವನು ಇನ್ನು ಬದುಕಲಾರನೆಂದು ಎಲ್ಲರೂ ಹೇಳುತ್ತಿದ್ದರು. ಹೊಸ ಚಕ್ರವರ್ತಿಯ ಆಯ್ಕೆಯೂ ಆಗಲೇ ಆಗಿ ಹೋಗಿತ್ತು. ಜನಗಳು ಬೀದಿಯಲ್ಲಿ "ಚಕ್ರವರ್ತಿಯ ದೇಹಸ್ಥಿತಿ ಹೇಗಿದೆ? ಹೇಗಿದೆ?" ಎಂದು ಆಸ್ಥಾನದ ಅಧಿಕಾರಿಗಳನ್ನು ಕೇಳುತ್ತಿದ್ದರು.

ಅವರು ಸುಮ್ಮನೆ ತಲೆಯಲ್ಲಾಡಿಸಿ "ಹೀ" ಎಂದು ಉತ್ತರ ಕೊಡುತ್ತಿದ್ದರು. ಚಕ್ರವರ್ತಿ ತನ್ನ ಬೆಲೆ ಬಾಳುವ, ಹಂಸದ ಗರಿಗಳ, ಮೃದುವಾದ ಹಾಸಿಗೆಯಲ್ಲಿ ಮುಖವೆಲ್ಲಾ ಬಿಳುಪೇರಿ ಮೈಯೆಲ್ಲಾ ತಣ್ಣಗಾಗಿ ಮಲ

ಗಿದ್ದ. ಆಸ್ಥಾನಿಕರು ಅವನು ಸತ್ತೇ ಹೋದನೆಂದು ಭಾವಿಸಿ ಹೊಸ ಚಕ್ರವರ್ತಿಗೆ ತಮ್ಮ ಗೌರವವನ್ನು ಸಲ್ಲಿಸಲು ಹೊರಟು ಹೋದರು. ಸೇವಕರು ರಾಜನ ಸಾವಿಗೆ ಸಂಬಂಧಪಟ್ಟ ಗಹನವಾದ ವಿಚಾರಗಳನ್ನು ಚರ್ಚಿಸಲು ಹೋದರು. ಹೆಣ್ಣು ಕೆಲಸಗಾರರು ಎಲ್ಲರಿಗೂ ದೊಡ್ಡದೊಂದು ಔತಣವನ್ನು ಏರ್ಪಡಿಸಿದರು. ಕಾಲಿನ ಸಪ್ಪಳ ಕೇಳದಿರಲೆಂದು ಎಲ್ಲಾ ಕೊಠಡಿಗಳಲ್ಲೂ ಕೈಸಾಲೆಗಳಲ್ಲೂ ರತ್ನಗಂಬಳಿಗಳನ್ನು ಹಾಸಿದ್ದರು. ಆದ್ದರಿಂದ ಎಲ್ಲೆಲ್ಲೂ ಬಹಳ ನಿಶ್ಶಬ್ದತೆಯಿತ್ತು. ಆದರೆ ಚಕ್ರವರ್ತಿ ಇನ್ನೂ ಸತ್ತಿರಲಿಲ್ಲ. ಅವನು ತನ್ನ ರತ್ನಖಚಿತವಾದ ರೇಷ್ಮೆಯ ಹಾಸುಗೆಯಲ್ಲಿ ಸೆಟೆದುಕೊಂಡು ರಕ್ತಹೀನನಾಗಿ ಬಿದ್ದಿದ್ದ. ಅವನ ತಲೆಯ ಮೇಲೆ ಎತ್ತರವಾದ ಸ್ಥಳದಲ್ಲಿ ಒಂದು ತೆರದ ಕಿಟಕಿಯಿತ್ತು. ಚಂದ್ರನ ಕಿರಣ ಆ ಕಿಟಕಿಯ ಮೂಲಕ ಚಕ್ರವರ್ತಿಯ ಮೇಲೂ ಅವನ ಬಳಿಯಲ್ಲಿದ್ದ ಹಕ್ಕಿಯ ಮೇಲೂ ಬೀಳುತ್ತಿತ್ತು.

ಪಾಪ! ಆ ಬಡ ಚಕ್ರವರ್ತಿಗೆ ಉಸಿರಾಡುವುದೇ ಕಷ್ಟವಾಗಿತ್ತು. ತನ್ನ ಎದೆಯ ಮೇಲೆ ಒಂದು ಭಾರವಿದ್ದಂತೆ ಅವನಿಗೆ ಭಾಸವಾಗುತ್ತಿತ್ತು. ಕಣ್ಣು ತೆರದು ನೋಡಿದ. ಆಗ ಮೃತ್ಯು ತನ್ನ ಚಿನ್ನದ ಕಿರೀಟವನ್ನು ಧರಿಸಿ ತನ್ನ ಎದೆಯ ಮೇಲೆ ಕುಳಿತಿದ್ದುದು ಕಂಡುಬಂತು ಅವನು ಒಂದು ಕೈಯಲ್ಲಿ ಚಕ್ರವರ್ತಿಯ ಬಂಗಾರದ ಕತ್ತಿಯನ್ನೂ ಇನ್ನೊಂದರಲ್ಲಿ ಅವನ ಸಾಮ್ರಾಜ್ಯದ ಧ್ವಜವನ್ನೂ ಹಿಡಿದಿದ್ದ. ಅವನ ರೇಷ್ಮೆಯ ನಿಲುವಂಗಿಯ ಮಡಿಕೆಯಿಂದ ಸುತ್ತಲೂ ವಿಚಿತ್ರವಾದ ಅನೇಕ ಮುಖಗಳು ಇಣಕಿ ನೋಡುತ್ತಿದ್ದುವು. ಅವುಗಳಲ್ಲಿ ಕೆಲವು ಕುರೂಪಿಗಳಾಗಿಯೂ ಕೆಲವು ಸೌಮ್ಯವಾಗಿಯೂ ಆಕರ್ಷಕವಾಗಿಯೂ ಇದ್ದುವು. ಅವುಗಳೆಲ್ಲಾ ಚಕ್ರವರ್ತಿ ಮಾಡಿದ್ದ ಪುಣ್ಯಪಾಪಗಳು. ಮೃತ್ಯು ಬಂದು ಅವನ ಮೇಲೆ ಕುಳಿತು ಆದುಮುತ್ತಿದ್ದಾಗ ಅವು ಅವನ ಮುಖವನ್ನು ದುರುಗುಟ್ಟಿ ನೋಡುತ್ತಿದ್ದವು.

ಒಂದಾಗುತ್ತಲೊಂದರಂತೆ ಅವು ಅವನನ್ನು "ನಿನಗೆ ಅದು ಜ್ಞಾಪಕವಿದೆಯೆ?" "ನಿನಗೆ ಇದು ಜ್ಞಾಪಕವಿದೆಯೆ?" ಎಂದು ಕೇಳಿ ಎನೇನೋ ಹೇಳತೊಡಗಿದವು. ಅವನಿಗೆ ಭಯವಾಗಿ, ಬೆವರು ಒಡೆದು. ಮುಖದ ಮೇಲೆ ಹನಿಗಳು ಹರಿಯ ತೊಡಗಿದವು.

ಚಕ್ರವರ್ತಿ “ಇದೆಲ್ಲಾ ಒಂದೂ ನನಗೆ ಗೊತ್ತಿಲ್ಲ; ಸಂಗೀತ; ಸಂಗೀತ; ಗಂಟೆಗಳನ್ನು ಬಾರಿಸಿರಿ! ನಾನು ಇವುಗಳ ಮಾತುಗಳನ್ನು ಕೇಳಲಾರೆ” ಎಂದು ಕೂಗಿಕೊಂಡ. ಆದರೆ ಅವು ತಮ್ಮ ಕಠೋರವಾದ ಮಾತುಗಳನ್ನು ಆಡಿಯೇ ಆಡಿದವು. ಮೃತ್ಯು ಚೀನೀಯರಂತೆಯೇ ಅವು ಹೇಳಿದುದಕ್ಕೆಲ್ಲಾ ತಲೆದೂಗುತ್ತ ಕುಳಿತಿದ್ದ,

ಚಕ್ರವರ್ತಿ “ಸಂಗೀತ! ಸಂಗೀತ!” ಎಂದು ಕಿರಿಚಿಕೊಂಡ. “ಓ, ಓ ನನ್ನ ಅಮೂಲ್ಯವಾದ ಪುಟ್ಟ ಹೊನ್ನಿನ ಹಕ್ಕಿ, ಹಾಡು, ಹಾಡು! ನಾನು ನಿನ್ನ ಮೇಲೆ ರತ್ನಾಭರಣಗಳ ಹೊರೆಯನ್ನೇ ಹೊರಿಸಿದ್ದೇನೆ. ನನ್ನ ಚಿನ್ನದ ಚಡಾವುಗಳನ್ನೇ ನಿನ್ನ ಕತ್ತಿಗೆ ಸುತ್ತುಹಾಕಿದ್ದೇನೆ. ಹಾಡು, ಮತ್ತೆ ಹೇಳುತ್ತೇನೆ, ಹಾಡು!“ ಎಂದು ಕೂಗಿದ.

ಹಕ್ಕಿ ಹಾಡಲಿಲ್ಲ; ಮೌನವಾಗಿಯೇ ಕುಳಿತಿತ್ತು. ಅದಕ್ಕೆ ಕೀಲಿ ಕೊಡಲು ಅಲ್ಲಿ ಯಾರೂ ಇರಲಿಲ್ಲ. ಆದುದರಿಂದ ಅದು ಕೆಲಸಮಾಡುವಂತೆ ಇರಲಿಲ್ಲ. ಮೃತ್ಯು ತನ್ನ ಅಗಲವಾದ ಕಣ್ಣುಗಳನ್ನು ಅವನ ಮೇಲೆ ನೆಟ್ಟು ಹೆದರಿಕೆಯನ್ನು ಹುಟ್ಟಿಸುವ ಹಾಗೆ ದುರುಗುಟ್ಟಿ ನೋಡುತ್ತಿದ್ದ.

ಎಲ್ಲವೂ ಮೌನವಾಗಿತ್ತು. ಭಯಂಕರವಾದ ಮೌನವಿತ್ತು. ಒಮ್ಮಿಂದೊಮ್ಮೆಯೇ ಅನಿರೀಕ್ಷಿತವಾಗಿ ಕಿಟಕಿಯ ಸಮೀಪದಲ್ಲಿ ಮನೋಹರವಾದ ಸಂಗೀತ ಆರಂಭವಾಯಿತು. ನಿಜವಾದ ಸಜೀವಿಯಾದ ಕೋಗಿಲೆ ಹೊರಗಡೆ ಒಂದು ಮರದ ಕೊಂಬೆಯ ಮೇಲೆ ಕುಳಿತು ಹಾಡುತ್ತಿತ್ತು. ಅದು ಚಕ್ರವರ್ತಿಗೆ ಬೇಕಾಗಿದ್ದುದನ್ನು ಕುರಿತು ಕೇಳಿ ಅವನ ಮನಸ್ಸಿಗೆ ಶಾಂತಿಯನ್ನೂ ಧೈರ್ಯವನ್ನೂ ತರಲು ಬಂದಿತ್ತು. ಅದು ಹಾಡಿದಂತೆಲ್ಲಾ ಮೃತ್ಯುವಿನ ಸುತ್ತಲೂ ಇದ್ದ ಮುಖಗಳು ಮಾಯವಾಗತೊಡಗಿದವು. ಚಕ್ರವರ್ತಿಯ ನಾಳಗಳಲ್ಲೂ ನಿರ್ಬಲವಾಗಿದ್ದ ಕೈಕಾಲುಗಳಲ್ಲೂ ಹೊಸ ಹುರುಪಿನಿಂದ ರಕ್ತ ಹರಿಯಲಾರಂಭಿಸಿತು. ಮೃತ್ಯು ಕೂಡ ಆ ಹಾಡನ್ನು ಕಿವಿಗೊಟ್ಟು ಲಾಲಿಸಿ, “ಹಾಡು, ಹಾಡು, ಪುಟ್ಟಕೋಗಿಲೆ, ಹಾಡು!” ಎಂದು ಅದನ್ನು ಪ್ರೋತ್ಸಾಹಿಸಿದ.

ಕೋಗಿಲೆ ಮೃತ್ಯುವಿಗೆ “ಆಗಬಹುದು. ಆದರೆ ನೀನು ನನಗೆ ಚಕ್ರವರ್ತಿಯ ಚಿನ್ನದ ಕತ್ತಿಯನ್ನೂ ಸಾಮ್ರಾಜ್ಯದ ಧ್ವಜವನ್ನೂ ಕಿರೀಟವನ್ನೂ ಕೊಟ್ಟರೆ ಮಾತ್ರ ಹಾಡುತ್ತೇನೆ“ ಎಂದು ಹೇಳಿತು.

ಒಂದು ಹಾಡನ್ನು ಕೇಳಿ ಆನಂದಿಸುವುದಕ್ಕಾಗಿ ಮೃತ್ಯು ಈ ಬಹು ಬೆಲೆಯ ವಸ್ತುಗಳನ್ನೆಲ್ಲಾ ಕೊಟ್ಟುಬಿಟ್ಟ. ಕೋಗಿಲೆ ಮುಂದೆಮುಂದಕ್ಕೆ ಹಾಡತೊಡಗಿತು. ಅದು ಪ್ರಶಾಂತಮಯವಾದ ದೇವಸ್ಥಾನದ ಹಿಂಭಾಗದ ತೋಟವನ್ನೂ, ಅದರಲ್ಲಿ ಆರಳಿ ಗಾಳಿಯನ್ನು ಸುಮಧುರವಾದ ಪರಿಮಳದಿಂದ ತುಂಬಿಸುವ ಹಿರಿಯ ಹೂಗಳನ್ನೂ, ಥಳಥಳಿಸುವ ಮಂಜಿನ ಮಣಿಗಳಿಂದ ಶೋಭಿಸುವ ಹೊಸದಾದ ಹಸುರು ಹುಲ್ಲನ್ನೂ ವರ್ಣಿಸಿ ಹಾಡಿತು. ಆ ಹಾಡನ್ನು ಕೇಳಿದೊಡನೆಯೇ ಮೃತ್ಯುವಿಗೆ ತನ್ನ ತೋಟದ ನೆನಪಾಯಿತು. ಅಲ್ಲಿಗೆ ಹಿಂದಿರುಗಬೇಕೆಂಬ ಅಭಿಲಾಷೆ ಅವನಲ್ಲಿ ಅತಿ ತೀವ್ರವಾಯಿತು, ಅವನು ಬೆಳಗಿನ ತಣ್ಣನೆಯ ಇಬ್ಬನಿಯ ರಾಶಿಯಂತೆ ಅದೃಶ್ಯನಾಗಿ ಕಿಟಕಿಯ ಮೂಲಕ ಹೊರಕ್ಕೆ ಹೊರಟುಹೋದ.

ಚಕ್ರವರ್ತಿ "ವಂದನೆಗಳು, ನಿನಗೆ ಅನಂತಾನಂತ ವಂದನೆಗಳು! ದೇವಲೋಕದ ಹಕ್ಕಿಯಂತಹ ಪುಟ್ಟಕೋಗಿಲೆ, ನಿನ್ನನ್ನು ನಾನು ಚೆನ್ನಾಗಿ ಬಲ್ಲೆ. ನಾನು ನಿನ್ನನ್ನು ನನ್ನ ರಾಜ್ಯದಿಂದ ಗಡೀಪಾರು ಮಾಡಿದೆ. ಆದರೂ ನನ್ನ ಹಾಸುಗೆಯ ಸುತ್ತಲೂ ಸೇರಿದ್ದ ಕೆಟ್ಟರೂಪಗಳನ್ನು ನೀನು ನಿನ್ನ ಸಂಗೀತವೆಂಬ ಮಂತ್ರದ ಪ್ರಭಾವದಿಂದ ಓಡಿಸಿದೆ ಮೃತ್ಯುವೇ ನನ್ನ ಎದೆಯ ಮೇಲಿನಿಂದ ಎದ್ದುಹೋಗುವಂತೆ ಮಾಡಿದೆ. ನಾನು ನಿನ್ನ ಉಪಕಾರಕ್ಕೆ ತಕ್ಕ ಪ್ರತಿಫಲವನ್ನು ಹೇಗೆ ತಾನೆ ಕೊಡಲಿ?" ಎಂದು ಕೇಳಿದ.

ಕೋಗಿಲೆ "ನೀನಾಗಲೇ ನನಗೆ ಪ್ರತಿಫಲವನ್ನು ಕೊಟ್ಟಿರುವೆ. ನಾನು ನಿನಗೆ ಮೊಟ್ಟಮೊದಲನೆಯ ಸಾರಿ ಹಾಡಿದಾಗಲೇ ನಿನ್ನ ಕಣ್ಣುಗಳಲ್ಲಿ ನೀರುಕ್ಕಿತು. ನಾನು ಅದನ್ನು ಎಂದಿಗೂ ಮರೆಯಲಾರೆ; ಆ ಕಣ್ಣೀರಿನ ಹನಿಗಳು ಹಾಡುಗಾರನ ಹೃದಯವನ್ನು ಸಂತೋಷಗೊಳಿಸಿ ಹುರಿದುಂಬಿಸುವ ಮಣಿರತ್ನಗಳು, ಆದರೆ ಇದೆಲ್ಲಾ ನನಗೆ ಬೇಡ. ನೀನೀಗ ಮಲಗಿ ನಿದ್ದೆ ಹೋಗು. ಬೆಳಗಾಗುತ್ತಲೆ ಹೊಸ ಶಕ್ತಿಯಿಂದ ಮೇಲಕ್ಕೇಳು. ಆಗ ನಿನಗಾಗಿ ಮತ್ತೆ ಹಾಡುವೆನು" ಎಂದಿತು.

ಹೀಗೆ ಹೇಳಿ ಕೋಗಿಲೆ ಪುನಃ ಹಾಡಲು, ಚಕ್ರವರ್ತಿ ಮಧುರ ಮನೋಹರವಾದ ನವಚೇತನವನ್ನು ಕೊಡುವ ಗಾಢನಿದ್ರೆ ಮಾಡಲಾರಂಭಿಸಿದ. ಮರುದಿನ ಮುಂಜಾನೆ ಅವನು ಸಂಪೂರ್ಣವಾದ ಆರೋಗ್ಯದಿಂದ ಎಚ್ಚೆತ್ತಾಗ

ಸೂರ್ಯನ ಕಿರಣಗಳು ಕಿಟಕಿಯ ಮೂಲಕ ಒಳಗೆ ಬಂದು ನಲಿಸಾಡು ತ್ತಿದ್ದವು. ಅವನ ಸೇವಕರಲ್ಲಿ ಯಾರೂ ಅವನ ಬಳಿಗೆ ಹಿಂದಿರುಗಿ ಬರಲಿಲ್ಲ. ಅವನು ಸತ್ತುಹೋಗಿದ್ದನೆಂದು ಅವರೆಲ್ಲರೂ ಭಾವಿಸಿದ್ದರು. ಆದರೆ ಕೋಗಿಲೆ ಮಾತ್ರ ಇನ್ನೂ ಹಾಡುತ್ತಾ ಅಲ್ಲಿಯೇ ಕುಳಿತಿತ್ತು.

ಚಕ್ರವರ್ತಿ "ನೀನು ಯಾವಾಗಲೂ ನನ್ನ ಹತ್ತಿರವೇ ಇರಬೇಕು. ನಿನಗೆ ಇಷ್ಟಬಂದಾಗ ಮಾತ್ರ ನೀನು ಹಾಡಬಹುದು. ನಾನು ಆ ಕೃತಕವಾದ ಹಕ್ಕಿಯನ್ನು ಸಾವಿರ ಚೂರುಗಳಾಗಿ ಒಡೆದುಹಾಕುತ್ತೇನೆ!" ಎಂದು ಹೇಳಿದ.

ಕೋಗಿಲೆ "ಹಾಗೆ ಮಾಡಬೇಡ' ಅದು ತನ್ನ ಕೈಲಾದಷ್ಟು ಒಳ್ಳೆಯ ದನ್ನು ಮಾಡಿತು. ಅದನ್ನು ನೀನು ಇಷ್ಟು ದಿನಗಳೂ ಇಟ್ಟಿದ್ದಂತೆಯೇ ಈಗಲೂ ಇಡು. ನಾನು ಈ ಅರಮನೆಯಲ್ಲಿ ಗೂಡು ಕಟ್ಟಿಕೊಂಡು ವಾಸಿಸಲು ಸಾಧ್ಯವಿಲ್ಲ. ನನಗೆ ಇಷ್ಟಬಂದಾಗಲೆಲ್ಲಾ ಬರುತ್ತೇನೆ; ಬಂದು ಈ ಮರದ ರೆಂಬೆಯ ಮೇಲೆ ಕುಳಿತು ಹಾಡುತ್ತೇನೆ. ನಿನಗೆ ಸಂತೋಷವನ್ನುಂಟು ಮಾಡಲು ಹಾಡುತ್ತೇನೆ. ನನ್ನ ಹಾಡು ನಿನ್ನನ್ನು ಆಲೋಚನಾಪರನನ್ನಾ ಗಿಯೂ ಮಾಡುವುದು. ಸುಖವಾಗಿ ಇರುವವರ ವಿಷಯವಾಗಿ ಮಾತ್ರವೇ ಅಲ್ಲದೆ ಕಷ್ಟಪಡುವವರ ವಿಷಯವಾಗಿಯೂ ಹಾಡುತ್ತೇನೆ. ಒಳ್ಳಿತನ್ನೂ ಕೆಡುಕನ್ನೂ ಕುರಿತು ಹಾಡುತ್ತೇನೆ. ಹಾಡುವ ಪುಟ್ಟ ಹಕ್ಕಿ ಬೆಸ್ತನ ಬಳಿಗೂ ಬೇಸಾಯಗಾರನ ಬಳಿಗೂ ನಿನ್ನ ಆಸ್ಥಾನದಿಂದ ಬಹುದೂರವಿರುವ ಜನಗಳ ಬಳಿಗೂ ಹಾರಿ ಹೋಗಿ ಬರುತ್ತದೆ. ನಿನ್ನ ಕಿರೀಟಕ್ಕಿಂತಲೂ ಹೆಚ್ಚಾಗಿ ನಿನ್ನ ಹೃದಯವನ್ನು ನಾನು ಪ್ರೀತಿಸುತ್ತೇನೆ. ಆದರೂ ಕಿರೀಟಕ್ಕೂ ಒಂದು ವಿಧ ವಾದ ಶ್ರೇಷ್ಠತೆಯಿದೆ. ನಾನು ಬಂದು ನಿನಗಾಗಿ ಹಾಡುತ್ತೇನೆ. ಆದರೆ ನೀನು ಒಂದು ವಿಚಾರದಲ್ಲಿ ಮಾತ್ರ ನನಗೆ ಮಾತು ಕೊಡಬೇಕು!" ಎಂದಿತು.

ಆಗತಾನೆ ತನ್ನ ರಾಜವೈಭವ ಸೂಚಕವಾದ ವಸ್ತ್ರಗಳನ್ನು ಧರಿಸಿ ಬಂಗಾರದಿಂದ ಭಾರವಾಗಿದ್ದ ಕತ್ತಿಯನ್ನು ಎದೆಯಮೇಲೆ ಹಿಡಿದಿದ್ದ ಚಕ್ರವರ್ತಿ "ಏನು ಬೇಕಾದರೂ ಕೊಡುತ್ತೇನೆ!" ಎಂದು ನುಡಿದ.

ಕೋಗಿಲೆ "ನಾನು ನಿನ್ನನ್ನು ಕೇಳಿಕೊಳ್ಳುವುದು ಒಂದೇ! ನಿನ್ನ ಹತ್ತಿರ ಏನು ಬೇಕಾದರೂ ಹಾಡುವ ಪುಟ್ಟ ಹಕ್ಕಿಯೊಂದಿದೆಯೆಂದು ಯಾರಿಗೂ ಹೇಳ ಬೇಡ. ಗುಟ್ಟಾಗಿದ್ದರೆ ಒಳ್ಳೆಯದು!" ಎಂದಿತು.

ಕೋಗಿಲೆ ಹಾರಿ ಹೋಯಿತು. ಸೇವಕರೆಲ್ಲರೂ ಸತ್ತು ಹೋಗಿರುವ ತಮ್ಮ ಚಕ್ರವರ್ತಿಯನ್ನು ನೋಡಬೇಕೆಂದು ಬಂದರು. ಅವರು ಬಂದಾಗ ಅವನು ವಸ್ತ್ರಾಲಂಕಾರಭೂಷಿತನಾಗಿ ನಿಂತಿದ್ದು "ಸುಪ್ರಭಾತ! ಆಸ್ಥಾನಿಕರೇ, ಸುಪ್ರಭಾತ!" ಎಂದ.

# ಚಕಮುಕಿ ಡಬ್ಬಿ

ಉತ್ತರ ದೇಶದಲ್ಲಿ ಒಮ್ಮೆ ಯುದ್ಧ ನಡೆಯಿತು. ಆ ಯುದ್ಧಕ್ಕೆ ಹೋಗಿದ್ದ ಒಬ್ಬ ಸೈನಿಕ ಅದು ಮುಗಿದನಂತರ ತನ್ನ ಊರಿಗೆ ಹಿಂತಿರುಗಿ ಬರುತ್ತಿದ್ದ. ಸೈನಿಕರು ನಡೆಯುವುದು ನಿಮಗೆ ಗೊತ್ತೇ ಇದೆ; "ಒಂದು, ಎರಡು, ಒಂದು, ಎರಡು, ಏಕ್, ದೋ; ಏಕ್, ದೋ" ಎಂದು ಠೀವಿಯಿಂದ ಕಾಲಿಡುತ್ತಿದ್ದ. ಅವನ ಹೆಗಲ ಮೇಲೆ ಒಂದು ಚೀಲವಿತ್ತು; ಸೊಂಟದಲ್ಲಿ ಒಂದು ಕತ್ತಿ ನೇತಾಡುತ್ತಿತ್ತು. ದಾರಿಯಲ್ಲಿ ಅವನ ಎದುರಿಗೆ ಒಬ್ಬ ಮಾಟಗಾತಿ ಮುದುಕಿ ಬಂದಳು ಅವಳು ನೋಡುವುದಕ್ಕೆ ಬಹಳ ಕುರೂಪಿಯಾಗಿದ್ದಳು. ಅವಳ ಕೆಳದುಟಿ ಉದ್ದವಾಗಿ ಬೆಳೆದು ಎದೆಯ ಮೇಲೆ ಕುಳಿತಿತ್ತು. ಅವಳು ಅವನನ್ನು ನೋಡಿ, "ನಮಸ್ಕಾರ, ಸೈನಿಕ! ನಿನ್ನ ಕತ್ತಿ ಎಷ್ಟು ಚೆನ್ನಾಗಿದೆ! ಎಷ್ಟು ದೊಡ್ಡ ಚೀಲ? ನೀನೀಗ ಸರಿಯಾದ ಸೈನಿಕ! ನಾನು ನಿನಗೆ ಬೇಕಾದಷ್ಟು ದುಡ್ಡು ಸಿಕ್ಕುವ ಹಾಗೆ ಮಾಡುತ್ತೇನೆ" ಎಂದಳು.

ಸೈನಿಕ "ಬಹಳ ಒಳ್ಳೆಯದು" ಎಂದ.

ಮಾಟಗಾತಿ "ಅಲ್ಲಿ ನೋಡು. ಆ ದೊಡ್ಡ ಮರ ಕಾಣುತ್ತದೆಯೆ?" ಎಂದು ಹತ್ತಿರದಲ್ಲಿದ್ದ ಒಂದು ಮರವನ್ನು ತೋರಿಸಿ, "ಆ ಮರದ ಒಳಗೆಲ್ಲಾ ಟೊಳ್ಳು. ನೀನು ಅದರ ತುದಿಯವರೆಗೂ ಹತ್ತಿ ಹೋಗಬೇಕು. ಅಲ್ಲಿ ಒಂದು ತೂತು ಇದೆ. ನೀನು ಆ ತೂತಿನ ಮೂಲಕ ಮರದ ಒಳಕ್ಕೆ ಹೋಗಬಹುದು. ನಾನು ನಿನ್ನ ಸೊಂಟಕ್ಕೆ ಒಂದು ಹಗ್ಗ ಕಟ್ಟಿರುತ್ತೇನೆ. ನೀನು ಕೂಗಿದಾಗ ಮೇಲಕ್ಕೆ ಎಳೆದುಕೊಳ್ಳುತ್ತೇನೆ" ಎಂದಳು.

ಸೈನಿಕ "ನಾನು ಮರದೊಳಕ್ಕೆ ಹೋಗಿ ಏನುಮಾಡಬೇಕು?" ಎಂದು ಕೇಳಿದ.

"ದುಡ್ಡು ಪಡೆಯಬೇಕು" ಎಂದು, ಆ ಮಾಟಗಾತಿ ಹೀಗೆ ಬಣ್ಣಿಸಿದಳು: "ನಾನು ಹೇಳುವುದನ್ನು ಗಮನವಿಟ್ಟು ಕೇಳು. ನೀನು ಮರದ ಬುಡಕ್ಕೆ ಬಂದಾಗ ಒಂದು ದೊಡ್ಡ ವಿಶಾಲವಾದ ಕೊಠಡಿ ಕಾಣುತ್ತದೆ. ಅಲ್ಲಿ

ಬೇಕಾದಷ್ಟು ಬೆಳಕಿರುತ್ತದೆ. ಮುನ್ನೂರು ಹಣತೆಗಳು ಅಲ್ಲಿ ಉರಿಯುತ್ತಿವೆ. ಆ ಕೊಠಡಿಯಲ್ಲಿ ನೀನು ಮೂರು ಬಾಗಿಲುಗಳನ್ನು ಕಾಣುತ್ತಿ. ಅವುಗಳ ಬೀಗದಕೈಗಳೂ ಹೊರಗಡೆಯೇ ನೇತಾಡುತ್ತಿರುತ್ತವೆ. ಆದ್ದರಿಂದ ನೀನು ಅವನ್ನು ಸುಲಭವಾಗಿ ತೆರೆಯಬಹುದು. ನೀನು ಮೊದಲನೆಯ ಕೋಣೆಯೊಳಗೆ ಹೋದರೆ, ಅದರ ನಡುವೆ ನೆಲದ ಮೇಲೆ ಒಂದು ದೊಡ್ಡ ಪೆಟ್ಟಿಗೆ ಇರುತ್ತದೆ. ಆ ಪೆಟ್ಟಿಗೆಯ ಮೇಲೆ ಒಂದು ನಾಯಿ ಕುಳಿತಿರುತ್ತದೆ. ಅದರ ಕಣ್ಣು ಎರಡು ದೊಡ್ಡ ಬಟ್ಟಲುಗಳಷ್ಟು ದೊಡ್ಡವು. ಆದರೆ ನೀನು ಅದಕ್ಕೆ ಹೆದರಬೇಕಾಗಿಲ್ಲ. ನಾನು ನಿನಗೆ ನನ್ನ ನೀಲಿಯ ಬಣ್ಣದ ಹೊದಿಕೆ ಕೊಡುತ್ತೇನೆ. ನೀನು ಅದನ್ನು ನೆಲದ ಮೇಲೆ ಹಾಸಿ, ಬೇಗನೆ ಪೆಟ್ಟಿಗೆಯ ಬಳಿಗೆ ಹೋಗಿ, ನಾಯಿಯನ್ನು ಮೇಲಕ್ಕೆತ್ತಿ ಅದನ್ನು ನನ್ನ ಹೊದಿಕೆಯ ಮೇಲೆ ಕೂಡಿಸಿಬಿಡು. ಅನಂತರ ಪೆಟ್ಟಿಗೆಯ ಬಾಗಿಲನ್ನು ತೆಗೆದು ನಿನಗೆ ಬೇಕಾದಷ್ಟು ಹಣ ತೆಗೆದುಕೊ. ಅಲ್ಲಿಯ ನಾಣ್ಯಗಳೆಲ್ಲಾ ತಾಮ್ರದ ನಾಣ್ಯಗಳು; ನಿನಗೆ ಬೆಳ್ಳಿಯ ನಾಣ್ಯ ಬೇಕಾದರೆ, ಎರಡನೆಯ ಕೋಣೆಗೆ ಹೋಗಬೇಕು. ಅಲ್ಲಿ ಆನೆಯ ಗಾತ್ರದ ಕಣ್ಣುಗಳುಳ್ಳ ನಾಯಿ ಕೂತಿರುತ್ತದೆ. ನೀನು ಅದಕ್ಕೂ ಹೆದರಬೇಡ. ಅದನ್ನು ನನ್ನ ಹೊದಿಕೆಯ ಮೇಲೆ ಕೂಡಿಸಿ ಬೇಕಾದಷ್ಟು ದುಡ್ಡನ್ನು ತೆಗೆದುಕೊ. ನಿನಗೆ ಬಂಗಾರದ ನಾಣ್ಯಗಳು ಬೇಕಾದರೆ ಮೂರನೆಯ ಕೋಣೆಗೆ ಹೋಗು. ಅಲ್ಲಿ ಬೇಕಾದಷ್ಟು ದೊರೆಯುತ್ತವೆ. ಅಲ್ಲಿ ಪೆಟ್ಟಿಗೆಯ ಮೇಲೆ ಕುಳಿತಿರುವ ನಾಯಿಯ ಕಣ್ಣುಗಳು ಗುಂಡಾದ ಗೋಪುರಗಳಷ್ಟು ದೊಡ್ಡವು. ಅದು ನಿಜವಾಗಿಯೂ ಬಹಳ ಭಯಂಕರವಾದ ನಾಯಿ. ಆದರೆ ಅದಕ್ಕೂ ನೀನು ಹೆದರಬೇಡ. ಅದನ್ನೂ ನನ್ನ ಬಟ್ಟೆಯ ಮೇಲೆ ಇಟ್ಟುಬಿಡು. ಅದು ನಿನಗೆ ಏನೂ ಅಪಾಯಮಾಡುವುದಿಲ್ಲ. ಆಮೇಲೆ ಪೆಟ್ಟಿಗೆಯೊಳಗಿನಿಂದ ಮನಸ್ಸಿಗೆ ಬಂದಷ್ಟು ಹಣ ತೆಗೆದುಕೊ."

ಸೈನಿಕ "ಇದೆಲ್ಲಾ ಸರಿಯೆ. ಆದರೆ ಇದಕ್ಕೆ ಪ್ರತಿಯಾಗಿ ನಿನಗೆ ನಾನು ಏನುಕೊಡಬೇಕು? ನೀನು ನನಗೋಸ್ಕರ ಇಷ್ಟೆಲ್ಲಾ ಸುಮ್ಮನೆ ಮಾಡುತ್ತೀಯಾ?" ಎಂದ.

ಅವಳು "ನನಗೆ ಏನೂಬೇಡ. ನಾನು ಒಂದು ಕಾಸನ್ನೂ ಮುಟ್ಟುವುದಿಲ್ಲ. ನೀನು ನನಗಾಗಿ ಏನೂ ಮಾಡಬೇಡ. ಅಲ್ಲಿ ಹಿಂದೆ ನಮ್ಮ ಅಜ್ಜಿ

ಹೋಗಿದ್ದಾಗ ಒಂದು ಚಕಮುಕಿ ಡಬ್ಬಿಯನ್ನು ಮರೆತು ಬಂದಿದ್ದಾಳೆ. ಅದನ್ನು ತಂದುಕೊಟ್ಟರೆ ಸಾಕು " ಎಂದಳು.

ಸೈನಿಕ "ಹಾಗಾದರೆ ನನ್ನ ಸೊಂಟಕ್ಕೆ ಹಗ್ಗ ಕಟ್ಟು " ಎಂದ.

ಮಾಟಗಾತಿ "ಇಗೋ ಕಟ್ಟುತ್ತೇನೆ. ಇದೋ ನನ್ನ ನೀಲಿಯ ಹೊದಿಕೆ " ಎಂದಳು.

ಅನಂತರ ಸೈನಿಕ ಮರವನ್ನು ಹತ್ತಿ ಒಳಗಿಳಿದ. ಮಾಟಗಾತಿ ಹೇಳಿದ್ದ ಹಾಗೆ ಮುನ್ನೂರು ಹಣತೆಗಳು ಉರಿಯುತ್ತಿದ್ದ ದೊಡ್ಡ ಕೊಠಡಿಯಲ್ಲಿ ಬಂದು ನಿಂತ.

ತರುವಾಯ ಅವನು ಅಲ್ಲಿದ್ದ ಮೊದಲನೆಯ ಕೋಣೆಯ ಬಾಗಿಲನ್ನು ತೆರೆದ. ಅಲ್ಲಿ ಬಟ್ಟಲಿನಗಲದ ಕಣ್ಣುಗಳುಳ್ಳ ನಾಯಿ ಕುಳಿತಿತ್ತು. ಅವನು ಬಾಗಿಲನ್ನು ತೆಗೆದೊಡನೆ ಅದು ಅವನನ್ನು ದುರುಗುಟ್ಟಿಕೊಂಡು ನೋಡತೊಡಗಿತು. ಸೈನಿಕ "ನೀನು ಒಳ್ಳೇ ಮರಿ " ಎನ್ನುತ್ತ ಆ ನಾಯಿಯನ್ನು ಎತ್ತಿ ಮಾಟಗಾತಿಯ ನೀಲಿಯ ಹೊದಿಕೆಯ ಮೇಲೆ ಕೂಡಿಸಿದ. ಅನಂತರ ತನ್ನ ಜೇಬು ಹಿಡಿಯುವಷ್ಟು ತಾಮ್ರದ ನಾಣ್ಯಗಳನ್ನು ತುಂಬಿಕೊಂಡು, ಪೆಟ್ಟಿಗೆಗೆ ಬೀಗಹಾಕಿ, ನಾಯಿಯನ್ನು ಮತ್ತೆ ಅದರ ಮೇಲೆ ಕೂಡಿಸಿ, ಎರಡನೆಯ ಕೋಣೆಗೆ ಹೋದ. ಅಲ್ಲಿ ಆನೆಯ ಗಾತ್ರದ ಕಣ್ಣುಗಳಿದ್ದ ನಾಯಿ ಕುಳಿತಿತ್ತು !

ಸೈನಿಕ "ಅಷ್ಟೊಂದು ದುರುಗುಟ್ಟಬೇಡಣ್ಣ, ಕಣ್ಣು ನೊಂದಾವು" ಎಂದು ಆ ನಾಯಿಯನ್ನು ಮಾಟಗಾತಿಯ ಹೊದಿಕೆಯ ಮೇಲಿಟ್ಟ. ಪೆಟ್ಟಿಗೆಯಲ್ಲಿ ಬೆಳ್ಳಿಯ ನಾಣ್ಯಗಳನ್ನು ಕಂಡೊಡನೆ ಅವನಿಗೆ ತನ್ನ ಜೇಬಿನಲ್ಲಿದ್ದ ತಾಮ್ರವೇತಕ್ಕೆ ಎನ್ನಿಸಿತು. ಆ ತಾಮ್ರದ ನಾಣ್ಯಗಳನ್ನು ಚೆಲ್ಲಿ, ಜೇಬುಗಳನ್ನೂ ಚೀಲವನ್ನೂ ಬೆಳ್ಳಿಯ ನಾಣ್ಯಗಳಿಂದ ತುಂಬಿಕೊಂಡ. ಅನಂತರ ಮೂರನೆಯ ಕೋಣೆಗೆ ಹೋದ. ಹೋ! ಏನು ಭಯಂಕರ! ಅಲ್ಲಿದ್ದ ನಾಯಿಯ ಕಣ್ಣು ನಿಜವಾಗಿಯೂ ಗೋಪುರಗಳಷ್ಟು ದೊಡ್ಡವಾಗಿದ್ದವು! ಅವು ನಾಯಿಯ ತಲೆಯಲ್ಲಿ ಚಕ್ರಗಳಂತೆ ಸುತ್ತುತ್ತಿದ್ದವು.

ಸೈನಿಕನಿಗೆ ಆ ನಾಯಿಯನ್ನು ಕಂಡು ಗೌರವ ಮೂಡಿತು. ಅವನು ಅದಕ್ಕೆ ಕೈ ಜೋಡಿಸಿ, "ನಮಸ್ಕಾರ, ರಾಯರೆ " ಎಂದ. ಅವನು ಅಂತಹ

ನಾಯಿಯನ್ನು ಹಿಂದೆ ಎಂದೂ ನೋಡಿಯೇ ಇರಲಿಲ್ಲ. ಆದ್ದರಿಂದ ಅದನ್ನೇ ಸ್ವಲ್ಪ ಹೊತ್ತು ರೆಪ್ಪೆಹಾಕದೆ ನೋಡುತ್ತಾ ನಿಂತ. ಆಮೇಲೆ "ಸಾಕು" ಎಂದುಕೊಂಡು, ಅದನ್ನು ಎತ್ತಿ ನೆಲದ ಮೇಲಿಟ್ಟು, ಪೆಟ್ಟಿಗೆಯ ಬಾಗಿಲನ್ನು ತೆಗೆದ. ಅಬ್ಬಬ್ಬ! ಎಷ್ಟೊಂದು ಚಿನ್ನವಿತ್ತು ಅಲ್ಲಿ!

ಆ ಚಿನ್ನದಿಂದ ಒಂದು ಇಡೀ ಪಟ್ಟಣವನ್ನೇ ಕೊಂಡುಕೊಳ್ಳ ಬಹುದಾಗಿತ್ತು! ಇಷ್ಟು ಹಣವಿದ್ದರೆ ಬೇಕುಬೇಕಾದುದೆಲ್ಲಾ ಅವನ ವಶ ವಾಗುವುದು ಖಂಡಿತ! ಮಿಠಾಯಿ, ಬೊಂಬೆ, ತಗಡಿನ ಸೈನಿಕರು, ಬಾರು. ಕೋಲುಗಳು, ಕುದುರೆ, ಏನುಬೇಕೆಂದರೂ ಸಿದ್ಧ! ಸೈನಿಕ ತಾನು ಹಿಂದೆ ಜೇಬಿನಲ್ಲೂ ಚೀಲದಲ್ಲೂ ತುಂಬಿಕೊಂಡಿದ್ದ ಬೆಳ್ಳಿಯ ನಾಣ್ಯಗಳನ್ನೆಲ್ಲಾ ಎಸೆದುಬಿಟ್ಟು ಅದಕ್ಕೆ ಬದಲಾಗಿ ಚಿನ್ನವನ್ನು ತುಂಬಿಕೊಂಡ. ಜೇಬು. ಚೀಲ, ಜೋಡು, ಟೋಪಿ ಎಲ್ಲವೂ ತುಂಬಿತುಳುಕುವಂತೆ ಬಂಗಾರದ ನಾಣ್ಯ ಗಳನ್ನು ತುಂಬಿದ. ಅಷ್ಟು ಭಾರ ಹೊತ್ತು ನಡೆಯುವುದೇ ಕಷ್ಟವಾಯಿತು. ಆದರೇನು? ಹೇರಳವಾಗಿ ದುಡ್ಡು ಸಿಕ್ಕಿತಲ್ಲ. ನಾಯಿಯನ್ನು ಮತ್ತೆ ಪೆಟ್ಟಿಗೆಯ ಮೇಲಿಟ್ಟು, ಬಾಗಿಲನ್ನು ಮುಚ್ಚಿ, ಮರದೊಳಗಿನಿಂದ "ಏ ಮುದುಕಿ, ನನ್ನನ್ನು ಮೇಲಕ್ಕೆಳೆದುಕೊ" ಎಂದು ಕೂಗಿದ.

ಮಾಟಗಾತಿ "ಚಕಮುಕಿ ಡಬ್ಬಿ ತೆಗೆದುಕೊಂಡೆಯಾ?" ಎಂದಳು.

"ಥೂ! ಇವರ ಮನೆ ಹಾಳಾಗ! ಮರೆತೇ ಹೋಯಿತು!" ಎನ್ನುತ್ತಾ ಸೈನಿಕ ಹೋಗಿ ಅದನ್ನು ತಂದ.

ಮಾಟಗಾತಿ ಅವನನ್ನು ಮೇಲಕ್ಕೆಳೆದಳು. ಅವನು ಮತ್ತೊಮ್ಮೆ ಹೆದ್ದಾರಿಯಲ್ಲಿ ನಿಂತ. ಅವನ ಜೇಬು, ಜೋಡು, ಚೀಲ, ಟೋಪಿ, ಎಲ್ಲಾ ಚಿನ್ನದಿಂದ ತುಂಬಿಹೋಗಿತ್ತು.

ಸೈನಿಕ "ಚಕಮುಕಿ ಡಬ್ಬಿ ತೆಗೆದುಕೊಂಡು ನೀನು ಏನು ಮಾಡುವೆ?" ಎಂದು ಕೇಳಿದ.

ಮಾಟಗಾತಿ "ಅದರ ಸುದ್ದಿ ನಿನಗೇಕೆ? ನಿನ್ನ ದುಡ್ಡು ನಿನಗೆ ಬಂತೋ ಇಲ್ಲವೋ? ನನ್ನ ಡಬ್ಬಿ ನನಗೆ ಕೊಡು" ಎಂದಳು.

ಸೈನಿಕ "ಅದೆಲ್ಲಾ ಸುಳ್ಳು! ಇದರಿಂದ ಏನು ಮಾಡುವೆ ಹೇಳು. ಇಲ್ಲದಿದ್ದರೆ ಕತ್ತಿ ಎಳೆದು ನಿನ್ನನ್ನು ಕೊಂದುಬಿಡುತ್ತೇನೆ" ಎಂದ.

ಮಾಟಗಾತಿ "ಹೇಳುವುದಿಲ್ಲ" ಎಂದಳು.

ಆಗ ಸೈನಿಕ ಅವಳ ತಲೆ ಕತ್ತರಿಸಿಬಿಟ್ಟ. ಅವಳು ದಾರಿಯಲ್ಲಿ ಸತ್ತು ಬಿದ್ದಳು. ಅವನು ತನ್ನ ಹಣವನ್ನೆಲ್ಲಾ ಅವಳ ಸೀಲಿಯ ಹೊದಿಕೆಯಲ್ಲಿ ಗಂಟುಕಟ್ಟಿ ಅದನ್ನು ಬೆನ್ನಿನ ಮೇಲೆ ಹೊತ್ತುಕೊಂಡು, ಚಕಮುಕಿ ಡಬ್ಬಿಯನ್ನು ಜೇಬಿನಲ್ಲಿಟ್ಟುಕೊಂಡು ನೇರವಾಗಿ ಒಂದು ಪಟ್ಟಣದ ಕಡೆಗೆ ಹೊರಟ.

ಆ ನಗರ ಬಹಳ ಸೊಗಸಾಗಿತ್ತು. ಸೈನಿಕ ಒಂದು ಅತ್ಯುತ್ತಮವಾದ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿ ವಾಸಮಾಡತೊಡಗಿದ. ಕೆಲಸ ಮಾಡಲು ಅನೇಕ ಜನ ಸೇವಕರನ್ನು ನೇಮಿಸಿಕೊಂಡ. ತನಗೆ ಬೇಕು ಬೇಕಾದ ಆಹಾರ ಪದಾರ್ಥಗಳನ್ನೆಲ್ಲಾ ತಿನ್ನತೊಡಗಿದ. ಅವನು ಎಷ್ಟು ಬೇಕಾದರೂ ಖರ್ಚುಮಾಡಬಹುದಾಗಿತ್ತು. ಅವನ ಜೋಡುಗಳನ್ನು ಒರೆಸುತ್ತಿದ್ದ ಸೇವಕನಿಗೆ ಮಾತ್ರ ಆಶ್ಚರ್ಯವಾಯಿತು. ಏಕೆಂದರೆ ಸೈನಿಕ ಇನ್ನೂ ತನ್ನ ಹಳೆಯ ಜೋಡುಗಳನ್ನೇ ಉಪಯೋಗಿಸುತ್ತಿದ್ದ. ಮಾರನೆಯ ದಿನ ತನ್ನ ಬದಲಾಯಿಸಿದ ಪರಿಸ್ಥಿತಿಗೆ ತಕ್ಕ ಜೋಡುಗಳನ್ನೂ ಸುಂದರವಾದ ಬಟ್ಟೆಗಳನ್ನೂ ತರಿಸಿದ. ಒಂದೆರಡು ದಿನಗಳಲ್ಲಿ ಸೈನಿಕ ಒಬ್ಬ ದೊಡ್ಡ ಮನುಷ್ಯನಾಗಿಬಿಟ್ಟ. ಅವನ ಬಳಿಗೆ ಅನೇಕರು ಬಂದು ಹೋಗುತ್ತಿದ್ದರು. ಇವರೆಲ್ಲಾ ಅವನಿಗೆ ಆ ಪಟ್ಟಣದಲ್ಲಿದ್ದ ನೋಡಬೇಕಾದ ವಸ್ತುಗಳನ್ನು ವರ್ಣಿಸುತ್ತಿದ್ದರು. ಹಾಗೆಯೇ ಅವರು ಆ ಪಟ್ಟಣದ ದೊರೆಯ ವಿಷಯವನ್ನೂ ಅವನ ಚೆಲುವೆಯಾದ ಮಗಳ ಸಂಗತಿಯನ್ನೂ ಹೇಳಿದರು.

"ಅವಳನ್ನು ನೋಡುವುದಕ್ಕೆ ಸಾಧ್ಯವೇ" ಎಂದು ಸೈನಿಕ ಕೇಳಿದ.

ಅವರು "ಅವಳನ್ನು ನೋಡಲು ಯಾರಿಗೂ ಸಾಧ್ಯವಿಲ್ಲ. ಅವಳು ಒಂದು ದೊಡ್ಡ ತಾಮ್ರದ ಕೋಟೆಯಲ್ಲಿದ್ದಾಳೆ. ಅವಳ ಅರಮನೆಯ ಸುತ್ತಲೂ ಅನೇಕ ಬಲವಾದ ಗೋಡೆಗಳೂ ಗೋಪುರಗಳೂ ಇವೆ. ಆ ಕೋಟೆಯ ಒಳಕ್ಕೆ ಹೋಗುವುದಕ್ಕಾಗಲಿ ಹೊರಕ್ಕೆ ಬರುವುದಕ್ಕಾಗಲಿ ರಾಜನಿಗಲ್ಲದೆ ಬೇರೆ ಯಾರಿಗೂ ಅವಕಾಶವಿಲ್ಲ. ರಾಜಕುಮಾರಿ ಒಬ್ಬ ಸಾಮಾನ್ಯ ಸೈನಿಕನನ್ನು

ಮದುವೆಯಾಗುವಳೆಂದು ಜೋಯಿಸರು ಭವಿಷ್ಯ ಹೇಳಿರುವುದೇ ಇದಕ್ಕೆ ಕಾರಣ. ರಾಜ ಇದನ್ನು ಸಹಿಸಲಾರ” ಎಂದು ತಿಳಿಸಿದರು.

ಸೈನಿಕನಿಗೆ ಅವಳನ್ನು ನೋಡಬೇಕು ಎನ್ನಿಸಿತು. ಆದರೆ ಹಾಗೆ ಮಾಡಲು ಅವನಿಗೆ ಅಪ್ಪಣೆ ದೊರೆಯಲಿಲ್ಲ. ಅವನು ಈಗ ಬಹಳ ವೈಭವದಿಂದ ಬಾಳುತ್ತಿದ್ದ. ಪ್ರತಿದಿನವೂ ನಾಟಕ ನೋಡಲು ಹೋಗುತ್ತಿದ. ಸಾಯಂಕಾಲದ ವೇಳೆ ಕುದುರೆಗಾಡಿಯಲ್ಲಿ ಕುಳಿತು ಗಾಳಿ ಸೇವನೆ ಮಾಡುತ್ತಿದ್ದ. ಬಡವರಿಗೆ ಬೇಕಾದಷ್ಟು ದುಡ್ಡು ಕೊಡುತ್ತಿದ್ದ. ಅವನು ಈಗ ಸಾಹುಕಾರನಾಗಿದ್ದರೂ ಕೈಯಲ್ಲಿ ಕಾಸು ಕೂಡ ಇಲ್ಲದೆ ಇದ್ದ ತನ್ನ ಹಿಂದಿನ ಬಡತನದ ದಿನಗಳನ್ನು ಮರೆತಿರಲಿಲ್ಲ. ಈಗ ಅವನು ಹಣಗಾರನಾಗಿದ್ದ. ಒಳ್ಳೊಳ್ಳೆಯ ಬಟ್ಟೆಗಳನ್ನು ಧರಿಸುತ್ತಿದ್ದ. ಬಹು ಮಂದಿ ಗೆಳೆಯರನ್ನು ಸಂಪಾದಿಸಿದ್ದ. ಅವರೆಲ್ಲರೂ ಅವನೊಬ್ಬ ಅಪರೂಪದ ಸೈನಿಕನೆಂದು ಹೇಳಿ ಹೊಗಳುತ್ತಿದ್ದರು. ಇದರಿಂದ ಅವನಿಗೆ ಬಹಳ ಸಂತೋಷವಾಗುತ್ತಿತ್ತು. ಆದರೆ ಅವನು ಪ್ರತಿದಿನ ವೆಚ್ಚಮಾಡುತ್ತಿದ್ದನೇ ಹೊರತು ಸಂಪಾದಿಸುತ್ತಿರಲಿಲ್ಲ. ಕೂಡಿಟ್ಟ ಹಣ ಎಷ್ಟು ದಿನ ತಾನೆ ಬಂದೀತು? ಕೊನೆಗೆ ಅವನ ಹತ್ತಿರ ಎರಡು ನಾಣ್ಯ ಮಾತ್ರ ಉಳಿದವು. ಅವನು ತಾನು ಇದ್ದ ಭವನವನ್ನು ಬಿಟ್ಟು ಬಡ ಗುಡಿಸಲಿಗೆ ಹೋಗಬೇಕಾಯಿತು; ತನ್ನ ಜೋಡುಗಳನ್ನು ತಾನೇ ಚೊಕ್ಕಟಮಾಡಿಕೊಂಡು, ಅವನ್ನು ಹೊಲಿಯುವ ಸೂಜಿಯಿಂದ ಸರಿಪಡಿಸಿಕೊಳ್ಳಬೇಕಾಯಿತು. ಈಗ ಅವನ ಸ್ನೇಹಿತರಲ್ಲಿ ಯಾರೂ ಹತ್ತಿರ ಬರಲಿಲ್ಲ. ಏಕೆಂದರೆ ಅವನಲ್ಲಿ ಏನೂ ದುಡ್ಡು ದೊರೆಯುತ್ತಿರಲಿಲ್ಲ.

ಒಂದು ದಿನ ಸಾಯಂಕಾಲ ಕಳೆದು ಕತ್ತಲಾಯಿತು. ಹಣತೆಗೆ ಎಣ್ಣೆ ತರಲು ಕೂಡ ಅವನಲ್ಲಿ ಕಾಸಿರಲಿಲ್ಲ. ಆಗ ಅವನಿಗೆ ತಾನು ತಂದಿದ್ದ ಚಕಮುಕಿ ಡಬ್ಬಿಯ ತುದಿಯಲ್ಲಿ ಒಂದು ಸಣ್ಣ ಮೇಣದ ಬತ್ತಿ ಇದ್ದುದು ನೆನಪಾಯಿತು. ಆ ಚಕಮುಕಿ ಡಬ್ಬಿಯಲ್ಲಿ ಎರಡು ಚಕಮುಕಿ ಕಲ್ಲುಗಳಿದ್ದವು. ಅವುಗಳ ನಡುವೆ ಒಂದು ಚೂರು ಹತ್ತಿಯಿತ್ತು. ಗುಂಡಿಯನ್ನು ಅದುಮಿದರೆ ಆ ಕಲ್ಲುಗಳು ಒಂದಕ್ಕೊಂದು ತಗುಲಿ, ಕಿಡಿ ಬಂದು, ಹತ್ತಿಗೆ ಬೆಂಕಿತಗುಲಿ, ಮೇಣದ ಬತ್ತಿಯೂ ಹೊತ್ತಿಕೊಂಡು ಉರಿಯುತ್ತಿತ್ತು. ಅವನು ಆ ಡಬ್ಬಿ

ಯನ್ನು ಈಚೆಗೆ ತೆಗೆದು ಗುಂಡಿಯನ್ನು ಅದುಮಿದ. ಕಿಡಿಗಳು ಹಾರಿದ ಕೂಡಲೆ ಬಾಗಿಲು ತೆರೆಯಿತು. ಹಿಂದೆ ಅವನು ಮರದೊಳಗೆ ಕಂಡಿದ್ದ ಬಟ್ಟಲಿನ ಗಾತ್ರದ ಕಣ್ಣುಗಳುಳ್ಳ ನಾಯಿ ಅವನ ಎದುರಿಗೆ ಬಂದು ನಿಂತು "ಒಡೆಯನ ಅಪ್ಪಣೆ ಏನು?" ಎಂದಿತು.

ಸೈನಿಕ "ಎಲಾ! ನನಗೆ ಬೇಕಾದುದೆಲ್ಲಾ ಇದರ ಸಹಾಯದಿಂದ ಸಿಕ್ಕುವ ಹಾಗಿದ್ದರೆ ಬಹಳ ಒಳ್ಳೆಯ ಡಬ್ಬಿ ಕಣಯ್ಯಾ ಇದು!" ಎಂದುಕೊಂಡು, "ನನಗೆ ಸ್ವಲ್ಪ ದುಡ್ಡು ತಂದುಕೊಡು" ಎಂದ. ಕಣ್ಣು ಮುಚ್ಚಿ ತೆರೆಯುವುದರೊಳಗೆ ನಾಯಿ ಹೊರಗೆ ಹೋಗಿ ಮತ್ತೆ ಬಂತು. ಅದರ ಬಾಯಲ್ಲಿ ರೂಪಾಯಿ ತುಂಬಿದ್ದ ಒಂದು ದೊಡ್ಡ ಚೀಲವಿತ್ತು.

ಅದು ಎಷ್ಟು ಪ್ರಯೋಜನಕಾರಿಯಾದ ಚಕಮಕಿ ಡಬ್ಬಿಯೆಂದು ಸೈನಿಕನಿಗೆ ಆಗ ಗೊತ್ತಾಯಿತು. ಅವನು ಅದರ ಗುಂಡಿಯನ್ನು ಒಂದುಸಾರಿ ಅದುಮಿದರೆ ತಾಮ್ರದ ನಾಣ್ಯಗಳ ಪೆಟ್ಟಿಗೆಯ ಮೇಲಿದ್ದ ನಾಯಿ ಬರುತ್ತಿತ್ತು! ಎರಡುಸಾರಿ ಅದುಮಿದರೆ ಬೆಳ್ಳಿಯ ನಾಣ್ಯಗಳ ಪೆಟ್ಟಿಗೆಯ ಮೇಲಿದ್ದ ನಾಯಿ ಬರುತ್ತಿತ್ತು; ಮೂರುಸಾರಿ ಅದುಮಿದರೆ ಚಿನ್ನದ ನಾಣ್ಯಗಳ ಪೆಟ್ಟಿಗೆಯ ಮೇಲಿದ್ದ ನಾಯಿ ಬರುತ್ತಿತ್ತು. ಸೈನಿಕ ಪುನಃ ಹಿಂದಿನಂತೆ ಉತ್ತಮ ಭವನಕ್ಕೆ ಹೋಗಿ ಬೆಲೆ ಬಾಳುವ ಬಟ್ಟೆಗಳನ್ನು ಧರಿಸತೊಡಗಿದ. ಮತ್ತೆ ಅವನ ಸ್ನೇಹಿತರೆಲ್ಲಾ ಬಂದು ಅವನನ್ನು ಹೊಗಳತೊಡಗಿದರು.

ಒಂದು ದಿವಸ ಅವನು "ರಾಜಕುಮಾರಿಯನ್ನು ನೋಡಲು ಯಾರಿಗೂ ಅವಕಾಶವಿಲ್ಲವಂತೆ. ಎಂಥ ತಿಳಿಗೇಡಿತನ! ಅವಳು ಬಹಳ ಚಲುವೆಯೆಂದು ಎಲ್ಲರೂ ಹೇಳುತ್ತಾರೆ, ಆದರೆ ಅವಳು ಯಾವಾಗಲೂ ಒಳಗೇ ಕುಳಿತಿದ್ದರೆ ಅವಳಿಗೆ ಎಷ್ಟು ಚೆಲುವಿದ್ದು ಏನು ಪ್ರಯೋಜನ? ನನಗೆ ಅವಳನ್ನು ನೋಡಲು ಸಾಧ್ಯವೇ ಇಲ್ಲವೇ? ಎಲ್ಲಿ? ನೋಡೋಣ! ನನ್ನ ಚಕಮುಕಿ ಡಬ್ಬಿ ಎಲ್ಲಿ?' ಎನ್ನುತ್ತ ಅದರ ಗುಂಡಿಯನ್ನು ಒತ್ತಿದ. ತಕ್ಷಣವೇ ಬಟ್ಟಲು ಗಾತ್ರದ ಕಣ್ಣುಗಳುಳ್ಳ ನಾಯಿ ಬಂತು.

ಸೈನಿಕ "ಈಗ ನಡು ರಾತ್ರಿಯಾಗಿರುವುದೇನೋ ನಿಜ, ಆದರೆ ನಾನು ಒಂದೇ ಕ್ಷಣವಾದರೂ ಚಿಂತೆಯಿಲ್ಲ, ರಾಜನ ಮಗಳನ್ನು ನೋಡಲು ಅಪೇಕ್ಷಿಸುತ್ತೇನೆ" ಎಂದ.

ನಾಯಿ ಕೂಡಲೆ ಹೊರಟು, ಸೈನಿಕ ರೆಪ್ಪೆ ಹೊಡೆಯುವುದರೊಳಗೆ ರಾಜಕುಮಾರಿಯನ್ನು ತನ್ನ ಬೆನ್ನಿನ ಮೇಲೆ ಕೂಡಿಸಿಕೊಂಡು ಹಿಂದಿರುಗಿ ಬಂತು. ಅವಳು ನಿದ್ದೆ ಮಾಡುತ್ತಿದ್ದಳು. ಅವಳು ನಿಜವಾಗಿಯೂ ರಾಜ ಕುಮಾರಿಯೇ ಆಗಿದ್ದಳು. ಸೈನಿಕ ಅವಳ ಕೆನ್ನೆಗೆ ಒಂದುಸಾರಿ ಮುತ್ತಿಟ್ಟ. ಆಮೇಲೆ ನಾಯಿ ಪುನಃ ರಾಜಕುಮಾರಿಯೊಂದಿಗೆ ಓಡಿಹೋಯಿತು. ಬೆಳಗಾದಾಗ ಅವಳು "ರಾತ್ರಿ ನನಗೆ ಒಂದು ವಿಚಿತ್ರವಾದ ಕನಸಾಯಿತು. ನಾನು ಒಂದು ನಾಯಿಯ ಬೆನ್ನಿನ ಮೇಲೆ ಸವಾರಿ ಮಾಡಿದೆ. ಒಬ್ಬ ಸೈನಿಕ ನನ್ನನ್ನು ಚುಂಬಿಸಿದ" ಎಂದು ರಾಜ ರಾಣಿಯರಿಗೆ ಹೇಳಿದಳು.

"ಒಳ್ಳೆಯ ಕತೆಯೇ!" ಎಂದು ರಾಣಿ ಗೊಣಗಿದಳು. ಮಾರನೇ ದಿನ ರಾತ್ರಿ ರಾಜಕುಮಾರಿಯ ಜೊತೆಯಲ್ಲಿ ಒಬ್ಬ ಹೆಂಗಸು ಮಲಗಿ ಅವಳು ಹೇಳಿದ್ದುದು ನಿಜವಾಗಿ ನಡೆದ ಸಂಗತಿಯೋ ಅಥವಾ ಬರಿಯ ಕನಸೋ ಕಂಡು ಹಿಡಿಯಬೇಕೆಂದು ಅಪ್ಪಣೆಯಾಯಿತು.

ಸೈನಿಕರಿಗೆ ಮತ್ತೊಮ್ಮೆ ರಾಜಕುಮಾರಿಯನ್ನು ನೋಡಬೇಕೆಂಬ ಆಸೆಯಾಯಿತು. ಆದ್ದರಿಂದ ನಾಯಿ ರಾತ್ರಿ ಪುನಃ ಬಂದು ಅವಳನ್ನು ಬೆನ್ನಿನ ಮೇಲೆ ಕೂಡಿಸಿಕೊಂಡು ಆದಷ್ಟು ವೇಗವಾಗಿ ಓಡಿಹೋಯಿತು. ಅವಳ ಜೊತೆಯಲ್ಲಿ ಮಲಗಿದ್ದ ಮುದಿ ಹೆಂಗಸು ಸಪ್ಪುಳವಾಗದ ಹಾಗೆ ಅವರ ಹಿಂದೆಯೇ ಓಡಿದಳು. ಅವರು ಒಂದು ದೊಡ್ಡ ಮನೆಯೊಳಗೆ ಪ್ರವೇಶಿಸುವುದನ್ನು ಕಂಡಾಗ ಅವಳು "ಇವರು ಇರುವ ಸ್ಥಳ ನನಗೆ ಈಗ ಗೊತ್ತಾಯಿತು" ಎಂದು ಒಂದು ಸೀಮೆಯ ಸುಣ್ಣದ ಚೂರಿನಿಂದ ಆ ಮನೆಯ ಬಾಗಿಲಿನ ಮೇಲೆ ಗುರುತು ಮಾಡಿದಳು. ಅನಂತರ ಅವಳು ಮನೆಗೆ ಹೋಗಿ ಮಲಗಿದಳು. ನಾಯಿಯೂ ರಾಜಕುಮಾರಿಯನ್ನು ಕರೆತಂದು ಬಿಟ್ಟು ಹೋಯಿತು. ಹಿಂದಿರುಗುವಾಗ ಸೈನಿಕನ ಮನೆಯ ಬಾಗಿಲಿನ ಮೇಲಿದ್ದ ಗುರುತನ್ನು ಕಂಡಿತು. ಕೂಡಲೆ ಅದು ತಾನೂ ಸುಣ್ಣವನ್ನು ತೆಗೆದುಕೊಂಡು ಪಟ್ಟಣದಲ್ಲಿದ್ದ ಬಾಗಿಲುಗಳ ಮೇಲೆಲ್ಲಾ ಅದೇ ತೆರದ ಗುರುತು ಬರೆದು ಬಿಟ್ಟಿತು. ಅದು ಬಹಳ ಬದ್ಧಿವಂತಿಕೆಯ ಕೆಲಸ ಮಾಡಿತು. ಅರಮನೆಯ ಮುದುಕಿಗೆ ಮನೆ ಯಾವುದೆಂದು ಕಂಡು ಹಿಡಿಯುವುದೇ ಅಸಾಧ್ಯವಾಯಿತು. ಏಕೆಂದರೆ ಎಲ್ಲಾ ಬಾಗಿಲುಗಳ ಮೇಲೂ ಒಂದು ಗುರುತಿತ್ತು.

ಮೂರನೆಯ ದಿನ ಮುಂಜಾನೆಯಲ್ಲಿ ರಾಜನೂ ರಾಣಿಯೂ ಆ ಹೆಂಗಸೂ ಇತರ ಅಧಿಕಾರಿಗಳೂ ರಾತ್ರಿ ರಾಜಕುಮಾರಿ ಹೋಗಿದ್ದ ಸ್ಥಳವನ್ನು ನೋಡಲು ಕುತೂಹಲದಿಂದ ಬೇಗನೆ ಎದ್ದು ಬಂದರು. ರಾಜ ಗುರುತು ಇದ್ದ ಒಂದು ಬಾಗಿಲನ್ನು ನೋಡಿ "ಇದೋ ಇಲ್ಲಿದೆ!" ಎಂದ. "ಇಲ್ಲ, ಇಲ್ಲಿದೆ!" ಎಂದು ರಾಣಿ ಇನ್ನೊಂದು ಬಾಗಿಲನ್ನು ತೋರಿಸಿದಳು. ಉಳಿದವರೆಲ್ಲಾ ಒಬ್ಬೊಬ್ಬರು ಒಂದೊಂದು ಬಾಗಿಲನ್ನು ತೋರಿಸತೊಡಗಿದರು. ಅವರು ತಿರುಗಿದ ಕಡೆಯೆಲ್ಲಾ ಬಾಗಿಲ ಮೇಲೆ ಗುರುತುಗಳಿದ್ದವು. ಆಗ, ಗುರುತಿನ ಆಧಾರದ ಮೇಲೆ ಹುಡುಕುವುದರಿಂದ ಏನೂ ಉಪಯೋಗವಿಲ್ಲವೆಂದುಕೊಂಡು ಎಲ್ಲರೂ ಅರಮನೆಗೆ ಹಿಂದಿರುಗಿದರು.

ಆದರೆ ರಾಣಿ ಬಹಳ ಬುದ್ಧಿಶಾಲಿಯಾಗಿದ್ದಳು. ಅವಳು ಇತರ ರಾಣಿಯರಂತೆ ಸುಮ್ಮನೆ ತಿಂದು ನಿದ್ರಿಸುತ್ತಿರಲಿಲ್ಲ. ಈಗ ಅವಳು ಬಂಗಾರದ ಕತ್ತರಿಯಿಂದ ರೇಷ್ಮೆಯ ಬಟ್ಟೆಯ ಚೂರನ್ನು ಕತ್ತರಿಸಿ, ಅದರಿಂದ ಒಂದು ಸಣ್ಣ ಚೀಲವನ್ನು ಹೊಲಿದಳು. ಆ ಚೀಲದ ತುಂಬ ಸೊಗಸಾದ ಗೋಧಿಯ ಹಿಟ್ಟನ್ನು ತುಂಬಿ, ಅದನ್ನು ರಾಜಕುಮಾರಿಯ ಬೆನ್ನಿಗೆ ಕಟ್ಟಿದಳು. ಅನಂತರ ಅದರಲ್ಲಿ ಒಂದು ಸಣ್ಣ ತೂತನ್ನು ಕೊರೆದಳು. ಆ ತೂತಿನ ಮೂಲಕ ಒಳಗಿದ್ದ ಹಿಟ್ಟು ರಾಜಪುತ್ರಿ ಹೋಗುವ ದಾರಿಯಲ್ಲಿ ಉದ್ದಕ್ಕೂ ಬೀಳುವಂತಿತ್ತು.

ರಾತ್ರಿ ನಾಯಿ ಪುನಃ ಬಂದು ರಾಜಕುಮಾರಿಯನ್ನು ತನ್ನ ಬೆನ್ನಿನ ಮೇಲೆ ಕೂಡಿಸಿಕೊಂಡು ಸೈನಿಕನ ಬಳಿಗೆ ಕರೆದೊಯ್ದಿತು. ಸೈನಿಕನಿಗೆ ಅವಳಲ್ಲಿ ಬಹಳ ಪ್ರೀತಿ ಹುಟ್ಟಿತು. ತಾನೂ ಒಬ್ಬ ರಾಜನ ಮಗನಾಗಿದ್ದರೆ ಅವಳನ್ನು ಮದುವೆಯಾಗಬಹುದಾಗಿತ್ತಲ್ಲಾ ಎಂದು ಅವನು ಚಿಂತಿಸುತ್ತಿದ್ದ. ನಾಯಿ ತಾನು ರಾಜಕುಮಾರಿಯನ್ನು ಅವಳಿದ್ದ ಕೋಟೆಯಿಂದ ಸೈನಿಕನ ಮನೆಗೆ ಕರೆದೊಯ್ದಾಗ ಅವಳ ಬೆನ್ನಿನ ಮೇಲಿದ್ದ ಚೀಲದಿಂದ ಹಿಟ್ಟು ದಾರಿಯುದ್ದಕ್ಕೂ ಸಾಲಾಗಿ ಬೀಳುತ್ತಿದ್ದುದನ್ನು ನೋಡಲಿಲ್ಲ. ಬೆಳಗಾದ ಮೇಲೆ ರಾಜ ರಾಣಿಯರು ತಮ್ಮ ಮಗಳು ಎಲ್ಲಿಗೆ ಹೋಗಿದ್ದಳೆಂಬುದನ್ನು ಸುಲಭವಾಗಿ ಕಂಡು ಹಿಡಿದರು. ಸೈನಿಕನನ್ನು ಹಿಡಿದು ಸೆರೆಮನೆಯಲ್ಲಿಟ್ಟರು.

ಸೈನಿಕ ಸೆರೆಮನೆಯಲ್ಲಿ ಕುಳಿತ. ಅಲ್ಲಿ ಬಹಳ ಕತ್ತಲೆಯಿತ್ತು. ಎಲ್ಲಾ ಅಸಹ್ಯವಾಗಿತ್ತು. ನ್ಯಾಯಾಧೀಶ ಅವನಿಗೆ ಮರಣ ದಂಡನೆಯನ್ನು ವಿಧಿಸಿದ.

ಅವನನ್ನು ನೇಣುಹಾಕಿ ಕೊಲ್ಲಬೇಕೆಂದು ಆಜ್ಞೆಯಾಯಿತು. ಸಾಯಬೇಕೆಂದರೆ ಯಾರಿಗೆ ತಾನೆ ಸಂತೋಷವಾಗುತ್ತದೆ? ಸೈನಿಕನಿಗೂ ಬಹಳ ದುಃಖ ವಾಯಿತು. ಅವನು ತನ್ನ ಚಕಮುಕಿ ಡಬ್ಬಿಯನ್ನು ತಾನು ಇದ್ದ ಮನೆಯಲ್ಲೇ ಮರೆತುಬಿಟ್ಟಿದ್ದ. ಬೆಳಗ್ಗೆ ಸೆರೆಮನೆಯ ಕಿಟಕಿಯಲ್ಲಿ ಕುಳಿತು ನೋಡುತ್ತಿದ್ದ. ಜನಗಳೆಲ್ಲರೂ ಸೈನಿಕನಿಗೆ ನೇಣಾಗುವುದನ್ನು ನೋಡಬೇಕೆಂದು ಊರ ಹೊರಕ್ಕೆ ಬೇಗಬೇಗನೆ ಹೋಗುತ್ತಿದ್ದರು. ಮದ್ದಲೆಗಳ ಸದ್ದು ಕೇಳಬಂತು. ರಾಜನ ಸಿಪಾಯಿಗಳೆಲ್ಲರೂ ಅಲ್ಲಿಗೆ ಸಾಲಾಗಿ ನಡೆಯುತ್ತಿದ್ದರು. ಜನಗಳೆಲ್ಲಾ ಓಡಿಹೋಗುತ್ತಿದ್ದರು. ಹೀಗೆ ಓಡುತ್ತಿದ್ದವರಲ್ಲಿ ಒಬ್ಬ ಮೋಚಿಯವರ ಹುಡುಗನಿದ್ದ. ಅವನು ಓಡುವ ರಭಸದಲ್ಲಿ ಅವನ ಕಾಲಿನ ಒಂದು ಎಕ್ಕಡ ಜಾರಿ, ಸೈನಿಕ ಕುಳಿತಿದ್ದ ಕಿಟಕಿಯ ಕೆಳಗೆ ಸರಿಯಾಗಿ ಬಿತ್ತು.

ಸೈನಿಕ ಆ ಹುಡುಗನನ್ನು ಕೂಗಿ, "ಅಯ್ಯಾ ಹುಡುಗ, ಇಷ್ಟು ಅವಸರ ಏಕೆ? ನಾನು ಬರುವವರೆಗೂ ಅಲ್ಲಿ ಏನೂ ಆರಂಭವಾಗುವುದಿಲ್ಲ. ನಾನು ಇದ್ದ ಮನೆಗೆ ಓಡಿಹೋಗಿ ನನ್ನ ಚಕಮುಕಿ ಡಬ್ಬಿಯನ್ನು ತಂದರೆ ನಿನಗೆ ಹಿಡಿ ಹಣ ಬಹುಮಾನವಾಗಿ ಕೊಡುತ್ತೇನೆ. ಎಲ್ಲಿ, ಓಡು ಮತ್ತೆ ನೋಡೋಣ" ಎಂದ.

ಮೋಚಿಯವರ ಹುಡುಗನಿಗೆ ಹಣಸಂಪಾದಿಸಬೇಕೆಂದು ಆಸೆಯಾಯಿತು. ಅವನು ಓಡಿಹೋಗಿ ಚಕಮುಕಿ ಡಬ್ಬಿಯನ್ನು ತಂದುಕೊಟ್ಟ.

ಊರಿನ ಹೊರಗಡೆ ನೇಣುಹಾಕುವ ಸಲಕರಣೆಯನ್ನು ಸಿದ್ಧ ಪಡಿಸಿದ್ದರು. ಅದರ ಸುತ್ತ ಸೈನಿಕರೂ ಸಾವಿರಾರು ಜನಗಳೂ ನಿಂತಿದ್ದರು. ದಿವ್ಯವಾದ ಸಿಂಹಾಸನದ ಮೇಲೆ ರಾಜನೂ ರಾಣಿಯೂ ಮಂಡಿಸಿದ್ದರು. ಅವರ ಎದುರಿಗೆ ನ್ಯಾಯಾಧೀಶನೂ ಮಂತ್ರಿಯೂ ಕುಳಿತಿದ್ದರು. ನಮ್ಮ ಸೈನಿಕ ಆಗಲೇ ಏಣಿಯನ್ನು ಹತ್ತಿ ನಿಂತಿದ್ದ. ರಾಜನ ನೌಕರನೊಬ್ಬ ಅವನ ಕೊರಳಿಗೆ ಹಗ್ಗವನ್ನು ಬಿಗಿಯುವುದಕ್ಕೆ ಬಂದ. ಆಗ ಸೈನಿಕ ತಾನು ಸಾಯುವ ಮೊದಲು ತನ್ನದೊಂದು ಸಣ್ಣ ಅಭಿಲಾಷೆಯಿದೆ, ಅದನ್ನು ನಡೆಸಿ ಕೊಡಬೇಕೆಂದು ಬೇಡಿದ. ರಾಜ ಹಾಗೆಯೇ ಆಗಲಿ ಎಂದ. ಸೈನಿಕ ಒಂದು ಬೀಡಿಯನ್ನು ಸೇದಲು ಅಪ್ಪಣೆ ಕೇಳಿದ. ಅದಕ್ಕೆ ರಾಜನ ಸಮ್ಮತಿ ದೊರೆಯಿತು. ಸೈನಿಕ ಬೀಡಿಯನ್ನು ಹೊತ್ತಿಸಲು ತನ್ನ ಚಕಮುಕಿ ಡಬ್ಬಿಯ

ಗುಂಡಿಯನ್ನು ಒಂದು ಸಾರಿ—ಎರಡು ಸಾರಿ—ಮೂರು ಸಾರಿ—ಅದುಮಿದ. ತತ್‌ಕ್ಷಣವೇ ಆವನ ನಾಯಿಗಳೆಲ್ಲಾ ಎದುರಿಗೆ ಬಂದು ನಿಂತವು. ಬಟ್ಟಲಿನಷ್ಟು ಕಣ್ಣುಗಳುಳ್ಳ ನಾಯಿ, ಆನೆಯ ಗಾತ್ರದ ಕಣ್ಣುಗಳುಳ್ಳ ನಾಯಿ, ಗೋಪುರದಷ್ಟು ಕಣ್ಣುಗಳುಳ್ಳ ನಾಯಿ, ಮೂರೂ ಬಂದವು.

ಸೈನಿಕ "ಇವರು ನನ್ನನ್ನು ನೇಣುಹಾಕಿ ಕೊಲ್ಲುತ್ತಿದ್ದಾರೆ. ಇದನ್ನು ತಪ್ಪಿಸಿ ನನಗೆ ಸಹಾಯ ಮಾಡಿ" ಎಂದ.

ಅವನು ಹಾಗೆಂದುದೇ ತಡ, ನಾಯಿಗಳೆಲ್ಲಾ ನ್ಯಾಯಾಧೀಶನ ಮೇಲೂ ಮಂತ್ರಿಗಳ ಮೇಲೂ ಬಿದ್ದು ಒಬ್ಬನ ಕಾಲನ್ನೂ ಇನ್ನೊಬ್ಬನ ಮೂಗನ್ನೂ ಮತ್ತೊಬ್ಬನ ಕಿವಿಯನ್ನೂ ಹಿಡಿದು ಅನೇಕ ಅಡಿಗಳ ಎತ್ತರದ ಮೇಲಕ್ಕೆ ಎಸೆದುಬಿಟ್ಟವು. ಅವರೆಲ್ಲರೂ ಕೆಳಗೆ ಬಿದ್ದು ಚೂರುಚೂರಾದರು.

ದೊರೆಗೆ ತುಂಬ ದಿಗಿಲಾಯಿತು. ಅವನು "ಇಲ್ಲ! ನೇಣುಹಾಕುವುದಿಲ್ಲ!" ಎಂದು ಕೂಗಿಕೊಂಡ. ಆದರೆ ಎಲ್ಲಕ್ಕಿಂತ ದೊಡ್ಡದಾದ ನಾಯಿ ರಾಜನನ್ನೂ ರಾಣಿಯನ್ನೂ ಒಟ್ಟಿಗೆ ಎತ್ತಿ ಎಸೆಯಿತು. ಅವರೂ ಸತ್ತರು. ಆಗ ಅಲ್ಲಿದ್ದ ರಾಜನ ಸಿಪಾಯಿಗಳೂ ಹೆದರಿದರು. ಜನ "ಸೈನಿಕ, ಸೈನಿಕ, ನೀನೇ ನಮ್ಮ ರಾಜನಾಗು. ನಮ್ಮ ರಾಜಕುಮಾರಿಯನ್ನು ಮದುವೆಯಾಗು" ಎಂದು ಕೂಗಿಕೊಂಡರು.

ಅನಂತರ ಎಲ್ಲರೂ ಸೇರಿ ಸೈನಿಕನನ್ನು ರಾಜನ ರಥದಲ್ಲಿ ಕೂಡಿಸಿಕೊಂಡು ಹೊರಟರು. ಆವನ ಮೂರು ನಾಯಿಗಳೂ ರಥದ ಮುಂದೆ ನೆಗೆಯುತ್ತಾ "ಜೈ! ಜೈ!" ಎಂದು ಕೂಗುತ್ತಿದ್ದವು. ಹುಡುಗರು ಸಿಳ್ಳುಹಾಕಿದರು. ಸೈನಿಕರು ಹೊಸ ರಾಜನಿಗೆ ಮರ್ಯಾದೆಯಿಂದ ವಂದನೆ ಮಾಡಿದರು. ರಾಜಕುಮಾರಿ ತಾಮ್ರದ ಕೋಟೆಯನ್ನು ಬಿಟ್ಟು ಹೊರಗೆ ಬಂದು ಸೈನಿಕನ ರಾಣಿಯಾದಳು. ಅವಳಿಗೂ ಬಹಳ ಸಂತೋಷವಾಯಿತು. ಮದುವೆ ಒಂದು ವಾರ ವೈಭವದಿಂದ ನಡೆಯಿತು. ನಾಯಿಗಳು ಮೂರೂ ಊಟ ಮಾಡುವಾಗ ತಮ್ಮ ಒಡೆಯನ ಜೊತೆಯಲ್ಲೇ ಕುಳಿತುಕೊಂಡು ಆಶ್ಚರ್ಯದಿಂದ ಮೊದಲಿಗಿಂತಲೂ ದೊಡ್ಡದಾಗಿ ಕಣ್ಣುಬಿಡುತ್ತಿದ್ದವು.

# ದೊಡ್ಡ ನಂಜ—ಚಿಕ್ಕ ನಂಜ

ಒಂದು ಊರಿನಲ್ಲಿ ಇಬ್ಬರಿದ್ದರು. ಇಬ್ಬರಿಗೂ 'ನಂಜ' ಎಂಬ ಒಂದೇ ಹೆಸರಿತ್ತು. ಅವರಲ್ಲಿ ಒಬ್ಬನ ಹತ್ತಿರ ಮೂರು ಎತ್ತುಗಳಿದ್ದವು. ಇನ್ನೊಬ್ಬನ ಹತ್ತಿರ ಒಂದೇ ಒಂದು ಎತ್ತು ಇತ್ತು. ಆದುದರಿಂದ ಜನ ಅವರನ್ನು ಸುಲಭವಾಗಿ ಗುರುತಿಸುವುದಕ್ಕೋಸ್ಕರ ಮೂರು ಎತ್ತು ಉಳ್ಳವನನ್ನು 'ದೊಡ್ಡ ನಂಜ' ಎಂದೂ ಒಂದೇ ಎತ್ತು ಉಳ್ಳವನನ್ನು 'ಚಿಕ್ಕ ನಂಜ' ಎಂದೂ ಕರೆಯುತ್ತಿದ್ದರು.

ವಾರವಾರವೂ ಚಿಕ್ಕ ನಂಜ ದೊಡ್ಡ ನಂಜನಿಗೆ ತನ್ನ ಒಂದು ಎತ್ತನ್ನು ಕೊಟ್ಟು ಅವನ ಹೊಲದಲ್ಲಿ ಉತ್ತು ಕೆಲಸಮಾಡಬೇಕಾಗಿತ್ತು. ಅದಕ್ಕೆ ಪ್ರತಿಯಾಗಿ ದೊಡ್ಡ ನಂಜ ಚಿಕ್ಕ ನಂಜನಿಗೆ ಸೋಮವಾರದ ದಿವಸ ಮಾತ್ರ ತನ್ನ ಮೂರು ಎತ್ತುಗಳನ್ನು ಎರವಲಾಗಿ ಕೊಡುತ್ತಿದ್ದ. ಆಗ ಚಿಕ್ಕ ನಂಜನ ಸಂತೋಷ ಹೇಳತೀರದು! ಅವನು ಬಹಳ ಉತ್ಸಾಹದಿಂದ ಬಾರುಕೋಲನ್ನು ಆಡಿಸುತ್ತ, ಆ ನಾಲ್ಕು ಎತ್ತುಗಳನ್ನೂ ನೇಗಿಲಿಗೆ ಹೂಡಿ ತನ್ನ ಭೂಮಿಯನ್ನು ಉಳುತ್ತಿದ್ದ. ಆ ಒಂದು ದಿನದ ಮಟ್ಟಿಗೆ ಎತ್ತುಗಳೆಲ್ಲಾ ತನ್ನವೇ ಆಗಿದ್ದಂತೆ ಅವನಿಗೆ ತೋರುತ್ತಿತ್ತು. ಸೋಮವಾರವಾದುದರಿಂದ ಹಳ್ಳಿಯ ಜನ ವಿರಾಮವಾಗಿ ಆನಂದದಿಂದ ಓಡಾಡುತ್ತಿದ್ದರು. ಆಗಾಗ ಹೊಲದಲ್ಲಿ ಉಕ್ಕೆ ಹೊಡೆಯುತ್ತಿದ್ದ ಚಿಕ್ಕ ನಂಜನನ್ನು ನೋಡುವರು. ಅವರು ಹಾಗೆ ನೋಡಿದಾಗಲೆಲ್ಲಾ ಚಿಕ್ಕ ನಂಜ ಹೆಮ್ಮೆಯಿಂದ ಉಬ್ಬುತ್ತಿದ್ದ; ಚಾವಟಿಯನ್ನು ಜೋರಾಗಿ ಬಾರಿಸಿ "ಹೇ! ಹೇ! ನನ್ನ ನಾಲ್ಕು ಎತ್ತೇ!" ಎನ್ನುತ್ತಿದ್ದ.

ದೊಡ್ಡ ನಂಜ ಅದನ್ನು ಕೇಳಿದ. ಅವನ ಹೊಟ್ಟೆ ಉರಿಯಿತು. ಅವನು "ನೀನು ಹಾಗೆ ಹೇಳಕೂಡದು. ಎಲ್ಲಾ ಎತ್ತುಗಳೂ ನಿನಗೆ ಸೇರಿಲ್ಲ" ಎಂದ. ಚಿಕ್ಕ ನಂಜನಿಗೆ ಏನು ಹೇಳಬೇಕೋ ಮರೆತುಹೋಯಿತು. ಯಾರಾದರೂ ದಾರಿಯಲ್ಲಿ ಹೋದರೆ ಸಾಕು, "ಹೇ! ಹೇ! ನನ್ನ ನಾಲ್ಕು ತ್ತೇ!" ಎಂದು ಕೂಗುತ್ತಿದ್ದ.

ಇದನ್ನು ಕಂಡು ದೊಡ್ಡ ನಂಜನಿಗೆ ಕೆರಳಿತು. ಅವನು ಚಿಕ್ಕ ನಂಜನ ಬಳಿ ಬಂದು "ಇನ್ನೊಂದು ಸಲ ನೀನು ಹಾಗೆ ಕೂಗಿದರೆ ನಿನ್ನ ಎತ್ತನ್ನು ಕತ್ತು ಮುರಿಯುವಂತೆ ಹೊಡೆದು ಸಾಯಿಸಿಬಿಡುತ್ತೇನೆ. ಎಚ್ಚರ!" ಎಂದು ಬೆದರಿಸಿದ.

ಚಿಕ್ಕ ನಂಜ "ಇಲ್ಲಣ್ಣ, ಇನ್ನೊಂದು ಸಾರಿ ಹಾಗೆ ಕೂಗುವುದಿಲ್ಲ. ನನ್ನಾಣೆ!" ಎಂದ. ಆದರೆ ಜನ ದಾರಿಯಲ್ಲಿ ಬಂದು ಅವನ ಕಡೆ ತಿರುಗಿ ದೊಡನೆ ಅವನು ಹೆಮ್ಮೆಯಿಂದ ಉಬ್ಬಿ "ಹೇ! ಹೇ! ನನ್ನ ನಾಲ್ಕೆತ್ತೇ!" ಎಂದು ಮತ್ತೆ ಕೂಗಿದ.

ಆಗ ದೊಡ್ಡ ನಂಜ ಒಂದು ಸುತ್ತಿಗೆಯನ್ನು ತೆಗೆದುಕೊಂಡು ಹೋಗಿ ಚಿಕ್ಕ ನಂಜನ ಎತ್ತಿನ ತಲೆಗೆ ಗುರಿಯಿಟ್ಟು ಹೊಡೆದ. ಅದು ಒಡನೆ ಸತ್ತು ಬಿತ್ತು.

"ಅಯ್ಯೋ! ನನಗೆ ಈಗ ಎತ್ತೇ ಇಲ್ಲವಲ್ಲ!" ಎಂದು ಚಿಕ್ಕ ನಂಜ ಅಳುತ್ತ ನಿಂತ. ಸ್ವಲ್ಪ ಹೊತ್ತಿನಮೇಲೆ ಸಮಾಧಾನ ಹೊಂದಿ, ಎತ್ತಿನ ಸತ್ತ ದೇಹವನ್ನು ಊರಿನ ಹೊರಗೆ ದೂರ ಸಾಗಿಸಿಕೊಂಡು ಹೋದ. ಅಲ್ಲಿ ಅದರ ಚರ್ಮವನ್ನು ಸುಲಿದು, ಅದು ಬಿಸಿಲಿನಲ್ಲೂ ಗಾಳಿಯಲ್ಲೂ ಒಣಗಲೆಂದು ಅದನ್ನು ಬಿಚ್ಚಿ ನೆಲದ ಮೇಲೆ ಹಾಸಿದ. ಚರ್ಮ ಒಣಗಿದ ಮೇಲೆ ಅದನ್ನು ಒಂದು ಚೀಲದಲ್ಲಿ ಹಾಕಿ ಮಾರುವುದಕ್ಕಾಗಿ ನೆರೆಯ ಊರಿಗೆ ಹೊರಟ. ಅವನು ನಡೆಯಬೇಕಾದ ದಾರಿ ಬಹಳವಿತ್ತು. ನಡುವೆ ದಟ್ಟವಾದ ಕಾಡನ್ನು ಬೇರೆ ದಾಟಿಹೋಗಬೇಕಾಗಿತ್ತು. ಅವನು ದೂರ ನಡೆಯುವುದಕ್ಕೆ ಮುಂಚೆಯೇ ಬಿರುಗಾಳಿ ಎದ್ದಿತು. ಅವನಿಗೆ ದಾರಿ ತಪ್ಪಿತು. ಮತ್ತೆ ಸರಿಯಾದ ದಾರಿ ಸಿಕ್ಕುವುದರೊಳಗೇ ಸಂಜೆಯಾಯಿತು. ಅವನು ಹೋಗ ಬೇಕಾಗಿದ್ದ ಪಟ್ಟಣ ಇನ್ನೂ ಬಹಳ ದೂರವಿತ್ತು. ಆದ್ದರಿಂದ ಅವನು ರಾತ್ರಿಯಾಗುವುದರೊಳಗೆ ಊರಿಗೆ ಹಿಂದಿರುಗುವಂತಿರಲಿಲ್ಲ. ಏನು ಮಾಡೋಣವೆಂದು ಯೋಚಿಸಿದ. ದಾರಿಯ ಮಗ್ಗುಲಲ್ಲಿ ಒಬ್ಬ ಬೇಸಾಯ ಗಾರನ ಮನೆಯಿತ್ತು. ಅದರ ಎಲ್ಲಾ ಬಾಗಿಲುಗಳನ್ನೂ ಮುಚ್ಚಿದ್ದರು. ಆದರೆ ಗಾಳಿ ಬರುವುದಕ್ಕೆಂದು ಗೋಡೆಯಲ್ಲಿ ಮಾಡಿದ್ದ ಎರಡು ಕಂಡಿಗಳಲ್ಲಿ

ಬೆಳಕು ಕಾಣುತ್ತಿತ್ತು. ಚಿಕ್ಕ ನಂಜ "ರಾತ್ರಿ ತಂಗಲು ಇಲ್ಲಿ ನನಗೆ ಅವಕಾಶ ದೊರೆಯಬಹುದು" ಎಂದುಕೊಂಡು ಹತ್ತಿರ ಹೋಗಿ ಬಾಗಿಲು ತಟ್ಟಿದ.

ರೈತನ ಹೆಂಡತಿ ಬಾಗಿಲು ತೆಗೆದು "ಏನು ಬೇಕು?" ಎಂದು ಕೇಳಿ, "ಹೊರಟು ಹೋಗು" ಎಂದುಬಿಟ್ಟಳು. ಏಕೆಂದರೆ ಅವಳ ಗಂಡನಿಗೆ ಗುರುತಿಲ್ಲದ ಹೊಸಬರನ್ನು ಕಂಡರೆ ಆಗುತ್ತಿರಲಿಲ್ಲ ಆ ಮನೆಯ ಪಕ್ಕದಲ್ಲಿ ದೊಡ್ಡದೊಂದು ಒಣಗಿದ ಹುಲ್ಲಿನ ಬಣವೆಯಿತ್ತು. "ನಾನು ಇದರ ಮೇಲೆ ಮಲಗಬಹುದು" ಎಂದುಕೊಂಡು ಚಿಕ್ಕ ನಂಜ ಅದರ ಮೇಲೆ ಹತ್ತಿ ಮಲಗಿದ.

ಮಲಗಿ ಹೊರಳಾಡುತ್ತಿದ್ದಾಗ ಗೋಡೆಯಲ್ಲಿದ್ದ ಕಿಂಡಿಗಳ ಮೂಲಕ ಮನೆಯ ಒಳಗೆ ನಡೆಯುತ್ತಿದ್ದುದೆಲ್ಲಾ ಅವನಿಗೆ ಕಂಡುಬಂತು. ಮನೆಯಲ್ಲಿ ಒಂದು ಮರದ ಮಂಚವಿತ್ತು. ಅವರ ಮೇಲೆ ಒಂದು ತಟ್ಟೆಯಲ್ಲಿ ಸೊಗಸಾದ ಬಿಳಿಯ ಜೋಳದ ರೊಟ್ಟಿಯೂ ಎಣ್ಣೆಗಾಯಿಯೂ ಇದ್ದವು ಎರಡು ಲೋಟ ಹಾಲು, ನೀರು, ಇದ್ದವು. ರೈತನ ಹೆಂಡತಿಯೂ ಆ ಊರಿನ ಗುಡಿಯ ಪೂಜಾರಿಯೂ ಒಟ್ಟಿಗೆ ಕುಳಿತಿದ್ದರು. ಪೂಜಾರಿ ರೊಟ್ಟಿಯನ್ನು ತಿನ್ನುತ್ತಿದ್ದ. ರೈತನ ಹೆಂಡತಿ ಅವನಿಗೆ "ಹಾಲು ಕುಡಿ" ಎಂದು ಹೇಳಿ ಉಪಚಾರಮಾಡುತ್ತಿದ್ದಳು. ಚಿಕ್ಕ ನಂಜನಿಗೆ ಹಸಿವಾಗಿತ್ತು. ಕತ್ತೆತ್ತಿ ಇಣಿಕಿ ನೋಡಿದ. ರೊಟ್ಟಿ ಎಣ್ಣೆಗಾಯಿಗಳನ್ನು ಕಂಡು ಅವನ ಬಾಯಲ್ಲಿ ನೀರೂರಿತು.

ಆ ವೇಳೆಗೆ ದಾರಿಯಲ್ಲಿ ಮನೆಯ ಕಡೆಗೆ ಯಾರೋ ಬರುವ ಶಬ್ದ ಕೇಳಿ ಬಂತು. ರೈತ ಮನೆಗೆ ಹಿಂದಿರುಗಿ ಬರುತ್ತಿದ್ದ. ಅವನು ಒಳ್ಳೆಯ ಸ್ವಭಾವದವನು. ಆದರೆ ಅವನಲ್ಲಿ ಒಂದು ಕೆಟ್ಟ ಗುಣವಿತ್ತು. ಪೂಜಾರಿಗಳನ್ನು ಕಂಡರೆ ಅವನಿಗೆ ಮೈಯೆಲ್ಲಾ ಬೆಂಕಿಯಾಗುತ್ತಿತ್ತು. ಯಾವನಾದರೂ ಪೂಜಾರಿ ಎದುರಿಗೆ ಬಂದರೆ ಅವನು ಕೋಪದಿಂದ ಉರಿದುಬೀಳುತ್ತಿದ್ದ. ಇದರ ಫಲವಾಗಿ ಪೂಜಾರಿ ರೈತನಿಲ್ಲದ ಸಮಯದಲ್ಲಿ ಅವನ ಹೆಂಡತಿಯನ್ನು ನೋಡಲು ಬಂದಿದ್ದ. ಪಾಪ, ಅವಳು ಅವನಿಗೆ ತನ್ನ ಮನೆಯಲ್ಲಿದ್ದ ಅತ್ಯುತ್ತಮವಾದ ಆಹಾರವನ್ನು ಒದಗಿಸಿದ್ದಳು. ಈಗ ಗಂಡ ಬರುವ ಸಪ್ಪುಳ ಕೇಳಿದೊಡನೆ ಅವಳಿಗೆ ಗಾಬರಿಯಾಯಿತು. ಅವನು ಏನು ಮಾಡುವನೋ ಎಂಬ ಹೆದರಿಕೆ

ಹೆಚ್ಚಾಯಿತು. ಆ ಕೋಣೆಯಲ್ಲೇ ಒಂದು ದೊಡ್ಡ ಪೆಟ್ಟಿಗೆಯಿತ್ತು. ಅದು ಬರಿದಾಗಿತ್ತು. ಅವಳು ಪೂಜಾರಿಯನ್ನು ಅದರಲ್ಲಿ ಅವಿತುಕೊಳ್ಳುವಂತೆ ಬೇಡಿಕೊಂಡಳು. ಅವನು ಹಾಗೇ ಮಾಡಿದ. ಆ ಮೇಲೆ ಅವಳು ಹಾಲು ರೊಟ್ಟಿ ಎಣ್ಣೆಗಾಯಿ ಎಲ್ಲವನ್ನೂ ಒಲೆಯ ಹಿಂದುಗಡೆ ಬಚ್ಚಿಟ್ಟಳು. ಅವು ಹೊರಗಿದ್ದರೆ, "ಇದನ್ನೆಲ್ಲಾ ಯಾರಿಗಾಗಿ ತಯಾರು ಮಾಡಿದೆ?" ಎಂದು ತನ್ನ ಗಂಡ ಎಲ್ಲಿಯಾದರೂ ಕೇಳಿಯಾನೆಂದು ಅವಳಿಗೆ ಗಾಬರಿ.

ಆಹಾರ ಪದಾರ್ಥಗಳೆಲ್ಲಾ ಮರೆಯಾದಾಗ ಚಿಕ್ಕನಂಜ "ಅಯ್ಯೋ"! ಎಂದು ನಿಟ್ಟುಸಿರು ಬಿಟ್ಟ.

"ಯಾರು, ಮೇಲೆ?" ಎಂದು ರೈತ ಬಣವೆಯ ಕಡೆಗೆ ನೋಡುತ್ತಾ ಕೇಳಿದ. ಚಿಕ್ಕನಂಜ ಅವನ ಕಣ್ಣಿಗೆ ಬಿದ್ದ: "ಅಲ್ಲಿ ಏಕೆ ಮಲಗಿದ್ದೀಯೆ? ಕೆಳಗಿಳಿದು ಮನೆಯೊಳಕ್ಕೆ ಬಾ" ಎಂದು ರೈತ ಕರೆದ. ಚಿಕ್ಕನಂಜ ಕೆಳಗಿಳಿದು ಬಂದು, ತಾನು ದಾರಿ ತಪ್ಪಿದ ವಿಚಾರವನ್ನೆಲ್ಲಾ ರೈತನಿಗೆ ಹೇಳಿ ರಾತ್ರಿ ಮಲಗಲು ಸ್ಥಳಕೊಡಬೇಕೆಂದು ಬೇಡಿದ.

ಒಳಗೆ ಹೋಗಿ ಅವರಿಬ್ಬರೂ ಮಂಚದ ಮೇಲೆ ಕುಳಿತರು. ರೈತನ ಹೆಂಡತಿ ಅವರನ್ನು ಬಹಳ ಆದರದಿಂದ ಉಪಚರಿಸಿದಳು. ಅವರ ಕೈಗೆ ಎರಡೆರಡು ರಾಗಿಯ ರೊಟ್ಟಿಗಳನ್ನೂ ಖಾರದ ಚಟ್ನಿಯನ್ನೂ ತಂದುಕೊಟ್ಟಳು. ರೈತನಿಗೆ ಬಹಳ ಹಸಿವಾಗಿತ್ತು. ಅವನು ರಾಗಿಯ ರೊಟ್ಟಿಯನ್ನು ಗಬಗಬನೆ ತಿನ್ನಲಾರಂಭಿಸಿದ. ಆದರೆ ಚಿಕ್ಕನಂಜ ಒಲೆಯ ಹಿಂದಿಟ್ಟಿದ್ದ ಜೋಳದ ರೊಟ್ಟಿಯನ್ನೂ ಎಣ್ಣೆಗಾಯನ್ನೂ ನೋಡಿದ್ದನಲ್ಲವೆ? ಅವನ ಮನಸ್ಸೆಲ್ಲಾ ಅವುಗಳ ಮೇಲೆಯೇ ಇತ್ತು. ಮಂಚದ ಕೆಳಗೆ, ತನ್ನ ಕಾಲ ಬಳಿ, ತಾನು ಮಾರಬೇಕೆಂದು ತಂದಿದ್ದ ಎತ್ತಿನ ಚರ್ಮವಿದ್ದ ಚೀಲವನ್ನು ಇಟ್ಟಿದ್ದ. ಅವನಿಗೆ ರಾಗಿಯ ರೊಟ್ಟಿ ರುಚಿಸಲಿಲ್ಲ. ಆದಕಾರಣ ಕೆಳಗಿದ್ದ ಚೀಲವನ್ನು ಕಾಲಿನಿಂದ ತುಳಿದ. ಚರ್ಮ ಒಣಗಿ ತಮ್ಮಟೆಯ ಹಾಗೆ ಗಟ್ಟಿಯಾಗಿತ್ತು. ಅವನು ತುಳಿದಾಗ ಅದು ಕೀರೆಂದು ಶಬ್ದಮಾಡಿತು. ಚಿಕ್ಕನಂಜ "ಹುಷ್" ಎನ್ನುತ್ತಾ ಹಾಗೆಯೇ ಇನ್ನೊಮ್ಮೆ ಅದನ್ನು ತುಳಿದ. ಅದು ಮೊದಲಿಗಿಂತಲೂ ಹೆಚ್ಚು ಶಬ್ದಮಾಡಿತು.

"ಏನಯ್ಯಾ ಅದು?" ಎಂದು ರೈತ ಕೇಳಿದ.

ಚಿಕ್ಕನಂಜ "ಇವನೊಬ್ಬ ಮಂತ್ರಗಾರ. ಒಲೆಯ ಹಿಂದೆ ಜೋಳದ ರೊಟ್ಟಿ ಎಣ್ಣೆಗಾಯಿ ಇರುವಾಗ ನಾವು ರಾಗಿಯ ರೊಟ್ಟಿ ಚಟ್ನಿಗಳನ್ನು ತಿನ್ನ ಬೇಕಾಗಿಲ್ಲ ಎನ್ನುತ್ತಾನೆ" ಎಂದು ಹೇಳಿದ.

"ಏನಯ್ಯಾ ಇದು ಆಶ್ಚರ್ಯ!" ಎನ್ನುತ್ತಾ ರೈತ ಧಿಗ್ಗನೆ ಮೇಲ ಕ್ಕೆದ್ದು ಹೋಗಿ ಒಲೆಯ ಹಿಂದೆ ಬಗ್ಗಿ ನೋಡಿದ. ಅಲ್ಲಿ ಅವನ ಹೆಂಡತಿ ಬಚ್ಚಿಟ್ಟಿದ್ದ ಒಳ್ಳೊಳ್ಳೆಯ ಪದಾರ್ಥಗಳೆಲ್ಲಾ ಇದ್ದವು. ಆದರೆ ಅವನು ಅವನ್ನೆಲ್ಲಾ ಮಂಚದ ಕೆಳಗಿದ್ದ ಮಂತ್ರಗಾರ ಮಾಡಿ ಇಟ್ಟಿದ್ದನೆಂದುಕೊಂಡ. ಅವನ ಹೆಂಡತಿಗೆ ಮಾತಾಡುವ ಧೈರ್ಯ ಇರಲಿಲ್ಲ. ಅವಳು ಅಲ್ಲಿದ್ದ ಪದಾರ್ಥಗಳನ್ನೆಲ್ಲಾ ತಂದು ಅವರ ಮುಂದಿಟ್ಟಳು. ಅವರು ಅದನ್ನು ತಿಂದು ತೇಗಿದರು.

ಆಗ ಚಿಕ್ಕನಂಜ ಮತ್ತೊಮ್ಮೆ ತನ್ನ ಚೀಲವನ್ನು ತುಳಿದ. ಅದು ಮೊದಲಿನಂತೆಯೇ ಕಿರೆಂದಿತು.

ರೈತ "ಅವನು ಈಗ ಏನು ಹೇಳುತ್ತಾನೆ?" ಎಂದು ಕೇಳಿದ.

ಅದಕ್ಕೆ ಚಿಕ್ಕನಂಜ "ಒಲೆಯ ಹಿಂದೆ ಎರಡು ಲೋಟ ಹಾಲು ನಮ ಗಾಗಿ ಕಾದಿದೆ ಎಂದು ಹೇಳುತ್ತಾನೆ" ಎಂದ. ರೈತನ ಹೆಂಡತಿ ಹಾಲನ್ನು ಬಲವಂತವಾಗಿ ಹೊರಕ್ಕೆ ತರಬೇಕಾಯಿತು. ರೈತ ಅದನ್ನು ಕುಡಿದು ಸಂತೋಷದಿಂದ ಮೈಮರೆತ.

"ನಿನ್ನ ಮಂತ್ರಗಾರ ದೆವ್ವಗಳನ್ನು ಓಡಿಸಬಲ್ಲನೆ?" ಎಂದು ರೈತ ಕೇಳಿದ. "ದೆವ್ವ ಹೇಗಿರುತ್ತೋ ನೋಡಬೇಕೆಂದು ನನಗೆ ಇಷ್ಟವಾಗುತ್ತದೆ" ಎಂದ.

"ಓಹೋ, ನನ್ನ ಮಂತ್ರಗಾರ, ನಾನು ಹೇಳಿದರೆ, ಏನುಬೇಕಾದರೂ ಮಾಡಬಲ್ಲ" ಎಂದು ಚಿಕ್ಕನಂಜ "ಅಲ್ಲವೇನಯ್ಯಾ?" ಎನ್ನುತ್ತ ಚೀಲ ವನ್ನು ತುಳಿದ. ಅದು ಕೂಗಿತು. "ಕೇಳಿದೆಯಾ? ಅವನು ಉತ್ತರ ಕೊಡುತ್ತಿದ್ದಾನೆ. ನಾವು ದೆವ್ವನ ಮುಖವನ್ನು ಕಂಡರೆ ಸಹಿಸುವುದಿಲ್ಲ ವೆಂಬುದೇ ಅವನ ಸಂದೇಹ" ಎಂದ.

ರೈತ "ನನಗೇನೂ ಹೆದರಿಕೆಯಿಲ್ಲ. ಆದರೂ—ನೀನು ಹೇಳು— ದೆವ್ವ ಹೇಗಿರುತ್ತೆ?" ಎಂದ.

ಚಿಕ್ಕನಂಜ "ಹೆಚ್ಚುಕಡಿಮೆ ಒಬ್ಬ ಪೂಜಾರಿಯಂತೆ" ಎಂದ.

ರೈತ "ಹಾ! ಹಾಗಾದರೆ ಅದು ಬಹಳ ಕುರೂಪಿಯಾಗಿರಬೇಕು! ನಿನಗೆ ಗೊತ್ತೆ? ನನಗೆ ಪೂಜಾರಿಗಳನ್ನು ಕಂಡರೆ ಆಗುವುದಿಲ್ಲ. ಆದರೂ ಚಿಂತೆಯಿಲ್ಲ. ದೆವ್ವ ಹೇಗಿರುತ್ತೆಂದು ನೋಡಿದ ಹಾಗಾಗುತ್ತೆ. ನನಗೇನೋ ಈಗ ಧೈರ್ಯವೇ! ಆದರೆ ಅದನ್ನು ನನ್ನ ಹತ್ತಿರಕ್ಕೆ ಮಾತ್ರ ಬರಗೊಡ ಬೇಡ" ಎಂದು ಹಲ್ಲು ಕಿರಿದ.

"ಹಾಗಾದರೆ ನಿಲ್ಲು! ನಾನು ಮಂತ್ರಗಾರನನ್ನು ಕೇಳಬೇಕು" ಎಂದು ಚಿಕ್ಕ ನಂಜ ಚೀಲವನ್ನು ತುಳಿದು, ಕೇಳುವವನಂತೆ ನಟಿಸಿ ಕೆಳಕ್ಕೆ ಬಗ್ಗಿ ಸ್ವಲ್ಪ ಹೊತ್ತು ಕಿವಿಯೊಡ್ಡಿದ ಅನಂತರ. "ಅವನು ಹೇಳುವುದೇನೆಂದರೆ. ನೀನು ಹೋಗಿ ಆ ಮೂಲೆಯಲ್ಲಿರುವ ದೊಡ್ಡ ಪೆಟ್ಟಿಗೆಯನ್ನು ತೆರೆಯಬೇಕು, ಅದರೊಳಗೆ ದೆವ್ವ ಮುದುರಿಕೊಂಡಿರುವುದು ಕಾಣುತ್ತದೆ. ಅದು ಓಡಿ ಹೋಗದಂತೆ ಬಾಗಿಲನ್ನು ಬಲವಾಗಿ ಹಿಡಿದಿರು. ಎಚ್ಚರ!" ಎಂದ.

"ನೀನೂ ನನಗೆ ಸಹಾಯಮಾಡಬೇಕು" ಎನ್ನುತ್ತಾ ರೈತ ಪೂಜಾರಿ ಬಚ್ಚಿಟ್ಟುಕೊಂಡಿದ್ದ ಪೆಟ್ಟಿಗೆಯ ಸಮೀಪಕ್ಕೆ ಹೋದ. ಅಲ್ಲಿ ಪೂಜಾರಿ ಹೆದರಿಕೆಯಿಂದ ತರತರನೆ ನಡುಗುತ್ತಿದ್ದ.

ರೈತ ಪೆಟ್ಟಿಗೆಯ ಬಾಗಿಲನ್ನು ಸ್ವಲ್ಪ ತೆರೆದು ಒಳಗೆ ಇಣಿಕಿ ನೋಡಿದ. ಹಾಗೇ ಹಿಂದಕ್ಕೆ ಹಾರುತ್ತ "ಹೋ!" ಎಂದ. "ನಾನು ಅದನ್ನು ನೋಡಿದೆ! ನಮ್ಮ ಪೂಜಾರಿಯಂತೆಯೇ ಇದೆ!" ಎಂದು ಕೂಗುತ್ತಾ ಓಡಿ ಬಂದು, ಇನ್ನು ಸ್ವಲ್ಪ ಹಾಲು ಕುಡಿದು, ಹರಟೆಹೊಡೆಯಲು ಮೊದಲು ಮಾಡಿದ. ಇಬ್ಬರೂ ಬಹಳ ಹೊತ್ತು ಹಾಗೆಯೇ ಕಳೆದರು.

"ನೀನು ಈ ಮಂತ್ರಗಾರನನ್ನು ನನಗೆ ಮಾರಬೇಕು" ಎಂದು ರೈತ ಕೇಳಿದ. "ನೀನು ಬೇಕಾದಷ್ಟು ಕೇಳು, ಕೊಡುತ್ತೇನೆ. ಈಗಲೇ ಬೇಕಾದರೆ ಮೂರು ಸೇರು ಹಣ ಕೊಡಲು ಸಿದ್ಧ" ಎಂದ.

ಅದಕ್ಕೆ ಚಿಕ್ಕನಂಜ ಬಹಳವಾಗಿ ಯೋಚಿಸುವವನ ಹಾಗೂ ಮನಸ್ಸಿಲ್ಲ ದವನ ಹಾಗೂ ನಟಿಸಿದ. ಕಡೆಗೆ, "ಒಳ್ಳೆಯದು; ನೀನು ನನಗೆ ರಾತ್ರಿ ತಂಗಲು ಸ್ಥಳ ಕೊಟ್ಟಿದ್ದೀಯೆ. ಆದ್ದರಿಂದ ನೀನು ಕೇಳಿದ್ದನ್ನು ಇಲ್ಲವೆನ್ನುವು

ದಿಲ್ಲ. ಮಂತ್ರಗಾರನನ್ನು ಮೂರು ಸೇರು ಹಣಕ್ಕೆ ನಿನಗೆ ಕೊಡುತ್ತೇನೆ. ಹಣ ಮಾತ್ರ ಸೇರಿನ ತುಂಬ ಬರಬೇಕು" ಎಂದ.

ರೈತ ಸಂತೋಷದಿಂದ ಉಬ್ಬಿ, "ಹಾಗೆಯೇ ಆಗಲಿ. ಆದರೆ ನೀನು ಆ ಪೆಟ್ಟಿಗೆಯನ್ನು ಒಯ್ದುಬಿಡಬೇಕು. ನಾನು ಅದನ್ನು ಇನ್ನೊಂದು ಘಳಿಗೆ ಕೂಡ ನಮ್ಮ ಮನೆಯಲ್ಲಿ ಇಟ್ಟುಕೊಂಡಿರಲಾರೆ" ಎಂದ.

"ಚಿಕ್ಕನಂಜ ತನ್ನ ಒಣಚರ್ಮವಿದ್ದ ಚೀಲವನ್ನು ರೈತನಿಗೆ ಕೊಟ್ಟು ಅದಕ್ಕೆ ಬದಲಾಗಿ ಮೂರು ಸೇರು ಹಣ ಪಡೆದ. ಪೆಟ್ಟಿಗೆಯನ್ನೂ ಹಣವನ್ನೂ ತೆಗೆದುಕೊಂಡು ಹೋಗುವುದಕ್ಕೋಸ್ಕರ ರೈತ ಅವನಿಗೆ ಒಂದು ಕೈಗಾಡಿಯನ್ನೂ ಕೊಟ್ಟ.

ಚಿಕ್ಕನಂಜ ಪೂಜಾರಿಯಿದ್ದ ಪೆಟ್ಟಿಗೆಯನ್ನೂ ತನ್ನ ಹಣವನ್ನೂ ತೆಗೆದುಕೊಂಡು, ಹೊರಡುವ ಮೊದಲು "ಹೋಗಿಬರುತ್ತೇನಪ್ಪ, ನೆನಪಿರಲಿ" ಎಂದು ಹೇಳಿ, ರೈತನಿಗೆ ಕೈಮುಗಿದು, ಗಾಡಿಯನ್ನು ನೂಕಿಕೊಂಡು ಮುಂದಕ್ಕೆ ನಡೆದ.

ದಾರಿಯಲ್ಲಿ ಒಂದು ನದಿಯಿತ್ತು. ಅದು ಅಗಲವಾಗಿ ಆಳವಾಗಿತ್ತು; ಬಹಳ ವೇಗವಾಗಿ ಹರಿಯುತ್ತಿತ್ತು. ಅದರ ಮೇಲೆ ಹೊಸದಾಗಿ ಸೇತುವೆ ಕಟ್ಟಿದ್ದರು. ಚಿಕ್ಕನಂಜ ಈ ಸೇತುವೆಯ ಮಧ್ಯ ಭಾಗದಲ್ಲಿ ನಿಂತು, ಪೂಜಾರಿಗೆ ಕೇಳಿಸುವಂತೆ ಗಟ್ಟಿಯಾಗಿ "ಈಗ ನಾನು ಈ ಪೆಟ್ಟಿಗೆಯನ್ನು ಏನುಮಾಡಲಿ? ಒಳಗೆಲ್ಲಾ ಕಲ್ಲುಗಳಿವೆಯೋ ಎನ್ನುವಷ್ಟು ಭಾರವಾಗಿದೆ! ಇನ್ನು ಮುಂದೆ ಇದನ್ನು ನೂಕಿಕೊಂಡು ಹೋದರೆ ನನಗೆ ಆಯಾಸವಾಗುವುದು ಖಂಡಿತ ಆದ್ದರಿಂದ ಇದನ್ನು ನದಿಯೊಳಕ್ಕೆ ಎಸೆದುಬಿಡುತ್ತೇನೆ. ಇದು ನನ್ನ ಹಿಂದೆ ಈಜಿಕೊಂಡು ಮನೆಗೆ ಬಂದರೆ ಒಳ್ಳೆಯದೇ ಆಯಿತು. ಇಲ್ಲದಿದ್ದರೆ ಶನೀಶ್ವರ ಕಳೆಯಿತು" ಎಂದು ಹೇಳಿದ. ಪೆಟ್ಟಿಗೆಯನ್ನು ಕೈಗೆ ತೆಗೆದುಕೊಂಡು ಅದನ್ನು ನೀರಿಗೆ ಎಸೆದುಬಿಡುವನೋ ಎನ್ನುವಂತೆ ಮೆಲಕ್ಕೆತ್ತಿದ.

"ಬೇಡ! ನಿಲ್ಲು! ನಾನು ಮೊದಲು ಹೊರಕ್ಕೆ ಬರುತ್ತೇನೆ" ಎಂದು ಒಳಗಿದ್ದ ಪೂಜಾರಿ ಕೂಗಿಕೊಂಡ.

ಚಿಕ್ಕನಂಜ ಬೆದರಿದವನಂತೆ ನಟಿಸಿ, "ಹಾ! ಇನ್ನೂ ಇದೆ! ಬೇಗ ನೀರಿಗೆ ಹಾಕಿ ಮುಳುಗಿಸಬೇಕು" ಎಂದು ಕೂಗಿದ.

**ಪೂಜಾರಿ** "ಬೇಡ! ಬೇಡ! ಮೂರು ಸೇರು ಹಣ ಕೊಡುತ್ತೇನೆ, ನನ್ನನ್ನು ಬಿಟ್ಟುಬಿಡು" ಎಂದು ಒದರಿದ.

"ಹಾಗಾದರೆ ಸರಿ!" ಎಂದು ಹೇಳುತ್ತ ಚಿಕ್ಕನಂಜ ಪೆಟ್ಟಿಗೆಯ ಬಾಗಿಲು ತೆಗೆದ. ಪೂಜಾರಿ ಹೊರಕ್ಕೆ ಹಾರಿ ಬರಿದಾದ ಪೆಟ್ಟಿಗೆಯನ್ನು ನೀರಿನೊಳಕ್ಕೆ ನೂಕಿದ. ಅನಂತರ ಚಿಕ್ಕನಂಜನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅವನಿಗೆ ಮೂರು ಸೇರು ಹಣವನ್ನು ಅಳೆದುಕೊಟ್ಟ. ಚಿಕ್ಕನಂಜನ ಹತ್ತಿರ ಈಗ ಆರು ಸೇರು ಹಣವಾಯಿತು.

"ನನ್ನ ಎತ್ತಿಗೆ ಒಳ್ಳೆಯ ಬೆಲೆಯೇ ಸಿಕ್ಕಿತು" ಎಂದುಕೊಳ್ಳುತ್ತ ಚಿಕ್ಕನಂಜ ಮನೆ ಸೇರಿ ತನ್ನ ಹಣವನ್ನೆಲ್ಲಾ ನೆಲದ ಮೇಲೆ ರಾಸಿ ಹಾಕಿದ. ನಾನು ನನ್ನ ಒಂದು ಎತ್ತಿನಿಂದ ಎಂಥ ಸಾಹುಕಾರನಾಗಿದ್ದೇನೆ ಎಂದು ದೊಡ್ಡ ನಂಜ ಕೇಳಿದರೆ ಅವನ ಹೊಟ್ಟೆಗೆ ಸುಣ್ಣ ಬಿದ್ದಂತೆ ಆಗುತ್ತದೆ. ಆದರೆ ನಾನು ಹೇಗೆ ಹಣ ಪಡೆದೆನೆಂದು ಅವನಿಗೆ ಹೇಳುವುದಿಲ್ಲ" ಎಂದುಕೊಂಡ. ಅನಂತರ ಅವನು ದೊಡ್ಡನಂಜನ ಮನೆಯಿಂದ ಒಂದು ಅಳತೆಯ ಸೇರನ್ನು ತರಲು ಒಬ್ಬನನ್ನು ಅಲ್ಲಿಗೆ ಕಳುಹಿಸಿದ.

ದೊಡ್ಡನಂಜ "ಇವನಿಗೆ ಸೇರು ಏತಕ್ಕೆ ಬೇಕಾಗಿರಬಹುದು?" ಎಂದು ಶಂಕೆ ಪಟ್ಟ. ಕಡೆಗೆ ಅದರಲ್ಲಿ ಏನಾದರೂ ಅಳೆದರೆ ಆ ಪದಾರ್ಥ ಅದರ ತಳಕ್ಕೆ ಅಂಟಿಕೊಳ್ಳಲೆಂಬ ಉದ್ದೇಶದಿಂದ ಸೇರಿನ ತಳಕ್ಕೆ ಸ್ವಲ್ಪ ಮೇಣವನ್ನು ಮೆತ್ತಿ ಕಳುಹಿಸಿದ. ನಡೆದದ್ದೂ ಹಾಗೆಯೇ. ಸೇರು ಹಿಂದಿರುಗಿ ಬಂದಾಗ ಅದರ ತಳದಲ್ಲಿ ಮೂರು ಹೊಸ ಬೆಳ್ಳಿಯ ನಾಣ್ಯಗಳು ಅಂಟಿಕೊಂಡಿದ್ದವು.

"ಇದೇನಿರಬಹುದು?" ಎನ್ನುತ್ತಾ ದೊಡ್ಡನಂಜ ಒಡನೆಯೇ ಚಿಕ್ಕನಂಜನ ಬಳಿಗೆ ಓಡಿಹೋಗಿ, "ಇಷ್ಟೊಂದು ಹಣ ಎಲ್ಲಿ ಸಂಪಾದಿಸಿದೆ?" ಎಂದು ಕೇಳಿದ.

"ನಿನ್ನೆ ನೀನು ಕೊಂದೆಯಲ್ಲ ಎತ್ತನ್ನು—ಅದರ ಚರ್ಮವನ್ನು ಮಾರಿದೆ" ಎಂದು ಚಿಕ್ಕನಂಜ ಹೇಳಿದ.

"ಹಾಗಾದರೆ ಒಳ್ಳೆಯ ಲಾಭವನ್ನೇ ಪಡೆದೆ" ಎಂದು ಹೇಳುತ್ತ ದೊಡ್ಡ ನಂಜ ತನ್ನ ಮನೆಗೆ ಸಟ್ಟಗೆ ಓಡಿದ. ಒಂದು ಕೊಡಲಿಯನ್ನು ತೆಗೆದುಕೊಂಡ. ತನ್ನ ಮೂರು ಎತ್ತುಗಳಿಗೂ ಒಂದೊಂದಾಗಿ ತಲೆಯ

ಮೇಲೆ ಹೊಡೆದ. ಅವು ಸತ್ತುಬಿದ್ದವು. ಅವುಗಳ ಚರ್ಮಗಳನ್ನು ಸುಲಿದು, ಅವನ್ನು ಮಾರಲು ನೆರೆಯ ಊರಿಗೆ ಒಯ್ದ.

ಆ ಊರಿನ ಬೀದಿಗಳಲ್ಲಿ ಅಲೆಯುತ್ತಾ "ಚರ್ಮ, ಚರ್ಮ, ಯಾರಿಗೆ ಬೇಕು ಚರ್ಮ?" ಎಂದು ಕೂಗಿದ. ಅಲ್ಲಿದ್ದ ಮೋಚಿಗಳೂ ಚರ್ಮವನ್ನು ಹದಮಾಡುವವರೂ ಹೊರಗೆ ಬಂದು "ಎಷ್ಟಕ್ಕೆ ಕೊಡುವೆ?" ಎಂದು ಕೇಳಿದರು. ದೊಡ್ಡನಂಜ "ಒಂದೊಂದಕ್ಕೆ ಮೂರು ಸೇರು ಹಣ" ಎಂದ. ಅವರಿಗೆ ಕೋಪ ಬಂತು. "ನಿನಗೇನಾದರೂ ತಲೆತಿರುಗಿದೆಯೇನಯ್ಯಾ?" ಎಂದು ರೇಗಿದರು.

ದೊಡ್ಡನಂಜ ಮತ್ತೆ ಕೂಗಿಕೊಂಡು ಹೋದ—"ಚರ್ಮ, ಚರ್ಮ, ಯಾರಿಗೆಬೇಕು ಚರ್ಮ?" ಎಂದು. ಯಾರಾದರೂ ಬೆಲೆಯನ್ನು ವಿಚಾರಿಸಿದರೆ ಮತ್ತೂ "ಒಂದೊಂದಕ್ಕೆ ಮೂರು ಸೇರು ಹಣ" ಎನ್ನುತ್ತಿದ್ದ.

"ನಮ್ಮನ್ನೆಲ್ಲಾ ಮುಟ್ಠಾಳರು ಎಂತ ತಿಳಿದಿದ್ದಾನೇನೊ ಇವನು" ಎಂದು ಆರ್ಭಟಿಸಿ ಅಲ್ಲಿದ್ದ ಮೋಚಿಗಳೂ ಇತರರೂ ತಮ್ಮ ಚರ್ಮದ ಪಟ್ಟಿಗಳನ್ನು ತೆಗೆದುಕೊಂಡು ಬಂದು ದೊಡ್ಡನಂಜನಿಗೆ ಚೆನ್ನಾಗಿ ಏಟುಬಿಗಿದು ಓಡಿಸಿಬಿಟ್ಟರು.

ದೊಡ್ಡನಂಜ ಮನೆಗೆ ಬಂದ. "ಚಿಕ್ಕನಂಜನಿಂದಲೇ ಇಷ್ಟೆಲ್ಲಾ ಆದದ್ದು. ಆಗಲಿ, ಅವನನ್ನು ಸಾಯಿಸಿಬಿಡುತ್ತೇನೆ" ಎಂದುಕೊಂಡ.

ಈ ಮಧ್ಯೆ ಚಿಕ್ಕನಂಜನ ಅಜ್ಜಿ ಸತ್ತುಹೋದಳು. ಬದುಕಿದ್ದಾಗ ಅವಳು ಅವನ ವಿಷಯದಲ್ಲಿ ಅಷ್ಟೇನೂ ವಿಶ್ವಾಸ ತೋರಿಸಿರಲಿಲ್ಲ. ಆದರೂ ಅವಳು ಸತ್ತಾಗ ಅವನಿಗೆ ಬಹಳ ವ್ಯಸನವಾಯಿತು. ಅವನು ಅವಳ ಹೆಣವನ್ನು ತೆಗೆದುಕೊಂಡು ಬಂದು ಬೆಚ್ಚಗಿದ್ದ ತನ್ನ ಹಾಸಿಗೆಯಲ್ಲಿ ಮಲಗಿಸಿದ. ಮತ್ತೆ ಏನಾದರೂ ಜೀವ ಬರುತ್ತೆಯೇನೋ ಎಂಬ ಆಸೆ ಅವನಿಗೆ. ಅವಳನ್ನು ಹಾಗೆಯೇ ಒಂದು ರಾತ್ರಿಯೆಲ್ಲಾ ಮಲಗಿಸಿರಬೇಕೆಂದು ಯೋಚಿಸಿ, ಚಿಕ್ಕನಂಜ ಕೋಣೆಯ ಒಂದು ಮೂಲೆಯಲ್ಲಿ ಕುಳಿತುಕೊಂಡ. ರಾತ್ರಿ ಬಾಗಿಲು ತೆರೆಯಿತು. ದೊಡ್ಡನಂಜ ಒಂದು ಕೊಡಲಿಯನ್ನು ಹಿಡಿದುಕೊಂಡು ಬಂದ, ಅವನಿಗೆ ಚಿಕ್ಕನಂಜನ ಹಾಸುಗೆ ಇದ್ದ ಸ್ಥಳ ಚೆನ್ನಾಗಿ ಗೊತ್ತಿತ್ತು. ಆದ್ದರಿಂದ ಅವನು ಬಂದವನೇ ನೇರವಾಗಿ ಹಾಸುಗೆಯ ಬಳಿಗೆ ಹೋಗಿ, ಅಲ್ಲಿ ಮಲಗಿ

ದ್ದುದು ಚಿಕ್ಕನಂಜನೆಂದು ಭಾವಿಸಿ, ಮುದುಕಿಯ ತಲೆಗೆ ಗುರಿಯಿಟ್ಟು ಹೊಡೆದ.

"ಇನ್ನು ನೀನು ನನಗೆ ಮೋಸಮಾಡಲಾರೆ" ಎಂದು ಹೇಳಿಕೊಳ್ಳುತ್ತಾ ಅವನು ಮನೆಗೆ ಹೋದ.

"ಎಂಥಾ ಕೆಟ್ಟಮನುಷ್ಯ ಇವನು! ನನ್ನನ್ನು ಕೊಲ್ಲಬೇಕು ಎಂದು ಆಲೋಚಿಸಿದ್ದನಲ್ಲ! ನಮ್ಮ ಅಜ್ಜಿ ಮೊದಲೇ ಸತ್ತಿದ್ದುದು ಒಳ್ಳೆಯದೇ ಆಯಿತು. ಇಲ್ಲದಿದ್ದರೆ ಅವಳ ಜೀವ ತೆಗೆದುಕೊಳ್ಳುತ್ತಿದ್ದ" ಎಂದು ಯೋಚಿಸುತ್ತ ಚಿಕ್ಕನಂಜ ಮೇಲಕ್ಕೆದ್ದ.

ಆಮೇಲೆ ಅವನು ತನ್ನ ಅಜ್ಜಿಯನ್ನು ಚೆನ್ನಾಗಿ ಸಿಂಗರಿಸಿದ. ಅವಳ ಅತ್ಯುತ್ತಮವಾದ ಬಟ್ಟೆಗಳನ್ನು ಹೆಣಕ್ಕೆ ತೊಡಿಸಿದ. ನೆರೆಯವನೊಬ್ಬನ ಎತ್ತನ್ನು ಕೇಳಿ ತೆಗೆದುಕೊಂಡು ಅದನ್ನು ಒಂದು ಸಣ್ಣ ಬಂಡಿಗೆ ಹೂಡಿದ. ಮುದುಕಿಯನ್ನು ಬಂಡಿಯ ಹಿಂಭಾಗದಲ್ಲಿ ಬೀಳದಂತೆ ಕೂಡಿಸಿ ಕಾಡಿಗೆ ಹೊಡೆದುಕೊಂಡು ಹೋದ. ಬೆಳಗಾಗುವ ವೇಳೆಗೆ ದಾರಿಯಲ್ಲಿ ಒಂದು ಸಣ್ಣ ಅಂಗಡಿ ಸಿಕ್ಕಿತು. ಆ ಅಂಗಡಿಯಲ್ಲಿ ಹಣ್ಣುಹಂಪಲುಗಳನ್ನು ತಿಂಡಿಯ ಪದಾರ್ಥಗಳನ್ನು ಮಾರುತ್ತಿದ್ದರು. ಕೇಳಿದವರಿಗೆ ಹಾಲೂ ದೊರೆಯುತ್ತಿತ್ತು ಅಂಗಡಿಯ ಮಾಲೀಕ ಒಳ್ಳೆಯ ಸ್ವಭಾವದ ಮನುಷ್ಯ. ಆದರೆ ಸ್ವಲ್ಪ ಕೋಪಿಷ್ಠ.

ಅಂಗಡಿಯವನು ಚಿಕ್ಕನಂಜನನ್ನು ಕಂಡು ನಮಸ್ಕಾರಮಾಡಿ "ಬಾರಣ್ಣಾ, ಬಹಳ ಬೇಗನೇ ಬಂದಿರುವೆಯಲ್ಲ!" ಎಂದ.

ಚಿಕ್ಕನಂಜ "ಹೌದು, ನಮ್ಮ ಅಜ್ಜಿಯೊಂದಿಗೆ ಪಟ್ಟಣಕ್ಕೆ ಹೋಗುತ್ತಿದ್ದೇನೆ. ಆಕೆ ಬಂಡಿಯ ಹಿಂಭಾಗದಲ್ಲಿ ಕೂತಿದ್ದಾಳೆ. ಇಳಿದುಬರಲು ಆಕೆಗೆ ಶಕ್ತಿಯಿಲ್ಲ. ನನಗೆ ಒಂದಿಷ್ಟು ತಿಂಡಿಯನ್ನು ಕೊಡು. ಹಾಗೆಯೇ ನಮ್ಮ ಅಜ್ಜಿಗೆ ಒಂದು ಲೋಟ ಹಾಲನ್ನು ಒಯ್ದು ಕೊಟ್ಟುಬಿಡು. ಪಾಪ, ಇಳಿದು ಬರುವುದಕ್ಕೆ ಆಕೆಗೆ ತ್ರಾಣವಿಲ್ಲ" ಎಂದ.

ಅಂಗಡಿಯವನು "ಅಗತ್ಯವಾಗಿ ಆಗಲಿ" ಎಂದು ಚಿಕ್ಕನಂಜನಿಗೆ ತಿಂಡಿಯನ್ನು ಕೊಟ್ಟ. ಚಿಕ್ಕನಂಜ "ನಮ್ಮ ಅಜ್ಜಿಗೆ ಕಿವಿ ಕೇಳುವುದಿಲ್ಲ; ನೀನು ಬಹಳ ಗಟ್ಟಿಯಾಗಿ ಮಾತಾಡಬೇಕು" ಎಂದು ಹೇಳಿದ.

"ಹಾಗೆಯೇ ಆಗಲಿ" ಎಂದು, ಅಂಗಡಿಯ ಮಾಲೀಕ ಒಂದು ಲೋಟದ ತುಂಬ ಹಾಲನ್ನು ತೆಗೆದುಕೊಂಡು ಬೀದಿಯಲ್ಲಿ ನಿಂತಿದ್ದ ಬಂಡಿಯ ಹತ್ತಿರ ಹೋಗಿ "ಅಜ್ಜೀ, ನಿನ್ನ ಮೊಮ್ಮಗ ಹಾಲು ಕಳಿಸಿದ್ದಾನೆ" ಎಂದು ಕೂಗಿದ. ಮುದುಕಿ ಮಾತಾಡಲಿಲ್ಲ. ಅವನು "ಕೇಳಿಸಲಿಲ್ಲವೆ ನಿನಗೆ? ನಿನ್ನ ಮೊಮ್ಮಗ ಹಾಲು ಕಳಿಸಿದ್ದಾನೆ" ಎಂದು ಇನ್ನೂ ಜೋರಾಗಿ ಕೂಗಿದ. ಮತ್ತೆ ಮತ್ತೆ ಅರಚಿದ. ಅವಳು ಅಲ್ಲಾಡಲಿಲ್ಲ. ಕಡೆಗೆ ಅವನಿಗೆ ತಡೆಯಲಾರದಷ್ಟು ಕೋಪ ಬಂತು. ಹಾಲಿನ ಲೋಟವನ್ನು ಎತ್ತಿ ಅವಳ ಮುಖಕ್ಕೆ ಬೀಸಿ ಎಸೆದ. ಅದು ಅವಳ ಮೂಗಿಗೆ ತಾಕಿತು. ಅವಳು ಹಿಂದಕ್ಕೆ ಉರುಳಿ ಬಂಡಿಯಿಂದ ಕೆಳಕ್ಕೆ ಬಿದ್ದುಬಿಟ್ಟಳು. ಚಿಕ್ಕನಂಜ ಅವಳನ್ನು ಅಲ್ಲಿ ಉಪಾಯದಿಂದ ಸುಮ್ಮನೆ ಕೂಡಿಸಿದ್ದನೆ ಹೊರತು ಕಟ್ಟಿರಲಿಲ್ಲ.

ಚಿಕ್ಕನಂಜ ಓಡಿಬಂದು, "ಏನಯ್ಯಾ? ನಮ್ಮ ಅಜ್ಜಿಯನ್ನು ಕೊಂದುಬಿಟ್ಟೆ! ಇಲ್ಲಿ ನೋಡು—ಅವಳ ಮುಖದಲ್ಲಿ ತೂತು ಬಿದ್ದಿದೆ!" ಎನ್ನುತ್ತಾ ಅಂಗಡಿಯವನ ಕತ್ತಿಗೆ ಕೈಹಾಕಿದ.

"ಬೆಳಗಾಗುವ ಹೊತ್ತಿಗೇ ಏನು ದುರದೃಷ್ಟವಪ್ಪಾ ಇದು!" ಎನ್ನುತ್ತಾ ಅಂಗಡಿಯವನು ಕೈ ಕಚ್ಚಿಕೊಂಡ. "ಇದೆಲ್ಲಾ ನನ್ನ ಕೋಪದ ಫಲ. ಅಣ್ಣಾ, ಚಿಕ್ಕನಂಜಪ್ಪ, ನಿನಗೆ ಮೂರು ಸೇರು ಹಣ ಕೊಡುತ್ತೇನೆ. ಈಕೆಯನ್ನು ನಮ್ಮ ಅಜ್ಜಿಯೇನೋ ಎನ್ನುವಂತೆಯೇ ಮರ್ಯಾದೆಯಿಂದ ಹೂಳಿ ಸಮಾಧಿ ಮಾಡುತ್ತೇನೆ. ನಿನ್ನ ದಮ್ಮಯ್ಯ, ಯಾರಿಗೂ ಹೇಳಬೇಡಪ್ಪ. ಗೊತ್ತಾದರೆ ನನ್ನ ತಲೆ ಹೋಗುತ್ತದೆ" ಎಂದು ಗಾಬರಿಯಿಂದ ಕೇಳಿಕೊಂಡ.

ಹೀಗೆ ಚಿಕ್ಕನಂಜನಿಗೆ ಮತ್ತೆ ಮೂರು ಸೇರು ಹಣ ಸಿಕ್ಕಿತು. ಅಂಗಡಿಯವನು ಮುದುಕಿ ತನ್ನ ಸ್ವಂತ ಅಜ್ಜಿಯೇ ಎನ್ನುವಂತೆ ಅವಳ ಹೆಣವನ್ನು ಭಕ್ತಿಯಿಂದ ಹೂಳಿದ.

ಚಿಕ್ಕನಂಜ ಮನೆ ಸೇರಿದ ಕೂಡಲೆ ಅಳತೆಯ ಸೇರನ್ನು ತರುವುದಕ್ಕೆ ಒಬ್ಬ ಹುಡುಗನನ್ನು ದೊಡ್ಡನಂಜನ ಮನೆಗೆ ಕಳುಹಿಸಿದ.

"ಇದೇನಿದು! ನಾನು ಅವನನ್ನು ಕೊಲ್ಲಲಿಲ್ಲವೆ? ಮತ್ತೆ ಹೇಗೆ ಬಂದ? ನಾನೇ ಹೋಗಿ ನೋಡಬೇಕು" ಎಂದು ದೊಡ್ಡನಂಜ ಸೇರನ್ನು ತಾನೇ ತೆಗೆದುಕೊಂಡು ಚಿಕ್ಕನಂಜನ ಮನೆಗೆ ಹೋದ.

ಚಿಕ್ಕನಂಜನ ಐಶ್ವರ್ಯವನ್ನು ಕಂಡು ಅವನ ಕಣ್ಣು ಅರಳಿದವು. "ಈ ಹಣವೆಲ್ಲಾ ನಿನಗೆ ಹೇಗೆ ಸಿಕ್ಕಿತು?" ಎಂದು ಅವನು ಕಿರಿಚಿದ.

ಚಿಕ್ಕನಂಜ "ನೀನು ಕೊಂದದ್ದು ನನ್ನನ್ನಲ್ಲ, ನಮ್ಮ ಅಜ್ಜಿಯನ್ನು. ಅವಳನ್ನು ಮೂರು ಸೇರು ಹಣಕ್ಕೆ ಮಾರಿದೆ" ಎಂದ.

"ಒಳ್ಳೆಯ ಬೆಲೆಯೇ ಕಣಯ್ಯಾ!" ಎನ್ನುತ್ತಾ ದೊಡ್ಡನಂಜ ತತ್‌ಕ್ಷಣವೇ ಮನೆಗೆ ಹೋಗಿ ತನ್ನ ಅಜ್ಜಿಯನ್ನು ಒಂದೇ ಏಟಿಗೆ ಕೊಂದುಬಿಟ್ಟ. ತರುವಾಯ ಒಬ್ಬ ವೈದ್ಯನ ಬಳಿಗೆ ಹೋಗಿ "ಸತ್ತ ಹೆಣವನ್ನು ಕೊಂಡು ಕೊಳ್ಳುತ್ತೀಯಾ?" ಎಂದು ಕೇಳಿದ.

"ಅದು ಯಾರ ಹೆಣ? ನಿನಗೆ ಹೇಗೆ ಬಂತು?" ಎಂದು ವೈದ್ಯ ಕೇಳಿದ.

ದೊಡ್ಡನಂಜ "ನಮ್ಮ ಅಜ್ಜಿಯದು. ನಾನು ಮೂರು ಸೇರು ಹಣ ಸಂಪಾದಿಸಬೇಕೆಂದು ಅವಳನ್ನು ಕೊಂದುಹಾಕಿದೆ" ಎಂದ.

ವೈದ್ಯನಿಗೆ ಆಶ್ಚರ್ಯವಾಯಿತು. "ಅಯ್ಯೋ ಹುಚ್ಚಾ, ತಲೆ ಕೆಟ್ಟಿದೆಯೋ ಹೇಗೆ ನಿನಗೆ? ಇಂತಹ ಮಾತನ್ನೆಲ್ಲಾ ಯಾರಿಗಾದರೂ ಹೇಳೀಯ! ನಿನ್ನ ತಲೆ ಉಳಿಯುವುದಿಲ್ಲ!" ಎಂದು ಅವನು ಮಾಡಿದ್ದ ಕೆಟ್ಟ ಕೆಲಸದ ಪರಿಣಾಮ ಏನಾಗುವುದೆಂಬುದನ್ನು ವಿಶದವಾಗಿ ತಿಳಿಸಿದ. ಅವನಿಗೆ ಶಿಕ್ಷೆಯಾಗುವುದು ಖಂಡಿತವೆಂದು ಹೇಳಿದ.

ದೊಡ್ಡನಂಜನಿಗೆ ಬಹಳ ಹೆದರಿಕೆಯಾಯಿತು. ವೈದ್ಯನ ಮನೆಯಿಂದ ಓಡಿ, ಹೊರಗೆ ಬಂದು, ಬಂಡಿಯೊಳಕ್ಕೆ ನೆಗೆದು, ಕೊಂಚವೂ ತಡಮಾಡದೆ ಅದನ್ನು ಮನೆಗೆ ಹೊಡೆದುಕೊಂಡು ಬಂದುಬಿಟ್ಟ. "ಮಾಡುತ್ತೇನೆ ನಿನಗೆ! ಚಿಕ್ಕನಂಜ, ಮಾಡುತ್ತೇನೆ ನಿನಗೆ!" ಎಂದುಕೊಂಡ.

ಮನೆಗೆ ಬಂದ ಮೇಲೆ, ದೊಡ್ಡನಂಜ ತನ್ನ ಹತ್ತಿರವಿದ್ದ ಗೋಣಿಯ ಚೀಲಗಳಲ್ಲಿ ಅತ್ಯಂತ ದೊಡ್ಡದನ್ನು ತೆಗೆದುಕೊಂಡು ಚಿಕ್ಕನಂಜನ ಬಳಿಗೆ ಹೋದ. "ಮತ್ತೆ ನನಗೆ ಮೋಸ ಮಾಡಿದ್ದೀಯೆ! ನಿನ್ನ ಮಾತನ್ನು ಕೇಳಿ ಮೊದಲು ನನ್ನ ಎತ್ತುಗಳನ್ನು ಕೊಂದೆ, ಆಮೇಲೆ ನನ್ನ ಅಜ್ಜಿಯನ್ನೇ ಕೊಂದೆ. ಇನ್ನು ನಿನ್ನ ಆಟ ನಡೆಯಲಾರದು!" ಎಂದು ಹೇಳಿ, ಚಿಕ್ಕನಂಜನನ್ನು ಹಿಡಿದು ಚೀಲದೊಳಕ್ಕೆ ತುರುಕಿ, ಬಿಗಿದ. "ಈಗ ನಾನು ನಿನ್ನನ್ನು ನದಿಯಲ್ಲಿ ಮುಳು

ಗಿಸಿಬಿಡುತ್ತೇನೆ!" ಎನ್ನುತ್ತಾ ಆ ಚೀಲವನ್ನು ಹೆಗಲ ಮೇಲೆ ಹಾಕಿಕೊಂಡು ಹೊರಟ.

ನದಿಯನ್ನು ಸೇರುವುದಕ್ಕೆ ಬಹಳ ದೂರ ಹೋಗಬೇಕಾಗಿತ್ತು. ಚಿಕ್ಕನಂಜನ ಭಾರ ಕಡಿಮೆಯೇನೂ ಇರಲಿಲ್ಲ. ದಾರಿಗೆ ಕೆಲವು ಮಾರು ದೂರದಲ್ಲಿ ಒಂದು ಚೌಡಮ್ಮನ ಗುಡಿಯಿತ್ತು. ಗುಡಿಯ ಮುಂದೆ ಸಣ್ಣ ಕೊಳವಿತ್ತು. ಕೊಳದ ಸುತ್ತಲೂ ದಟ್ಟವಾಗಿ ಮರಗಿಡಗಳು ಬೆಳದಿದ್ದುವು. ದೊಡ್ಡನಂಜನಿಗೆ ಶತ್ರುವನ್ನು ಹೊತ್ತು ಆಯಾಸವಾಗಿತ್ತು. ಕೊಳವನ್ನು ಕಂಡೊಡನೆ ಅವನಿಗೆ ನೀರು ಕುಡಿದು ಬಾಯಾರಿಕೆಯನ್ನು ತೀರಿಸಿಕೊಳ್ಳಬೇಕೆಂಬ ಆಸೆ ಉಂಟಾಯಿತು. ಹಾಗೆಯೇ ತನ್ನ ಹಿತಶತ್ರುವಿಗೆ ಕ್ರೂರವಾದ ಸಾವನ್ನು ಕೊಡುವಂತೆ ಚೌಡೇಶ್ವರಿಯನ್ನು ಬೇಡಿ ಬರೋಣವೆಂದು ಯೋಚಿಸಿದ. ಚೀಲದಿಂದ ತಪ್ಪಿಸಿಕೊಳ್ಳುವುದು ಚಿಕ್ಕನಂಜನಿಗೆ ಸಾಧ್ಯವಿಲ್ಲವೆಂದು ಅವನು ತಿಳಿದಿದ್ದ. ಆದ್ದರಿಂದ ಚೀಲವನ್ನು ನಡು ಹಾದಿಯಲ್ಲಿಯೇ ಬಿಟ್ಟು ಗುಡಿಗೆ ಹೋದ.

ಚೀಲದಲ್ಲಿದ್ದ ಚಿಕ್ಕನಂಜ ಒಳಗಡೆಯೇ ತಿರುಗಿ ಕೈಕಾಲಾಡಿಸಲು ಪ್ರಯತ್ನಿಸಿದ. ಆದರೆ ಅದನ್ನು ಕಟ್ಟಿದ್ದ ದಾರವನ್ನು ಸಡಲಿಸುವುದಕ್ಕೆ ಅವನಿಗೆ ಆಗಲಿಲ್ಲ. ಅಷ್ಟರಲ್ಲೇ ಒಬ್ಬ ದನಕಾಯುವ ಮುದುಕ ದೊಡ್ಡದೊಂದು ದನಗಳ ಮಂದೆಯನ್ನು ಸಾಗಿಸಿಕೊಂಡು ಆ ಕಡೆ ಬಂದ. ಅವನ ಕೈಯಲ್ಲಿ ಉದ್ದವಾದ ಒಂದು ಕೋಲು ಇತ್ತು. ದನಗಳು ಚಿಕ್ಕನಂಜ ಇದ್ದ ಚೀಲವನ್ನು ಎಡವಿದವು. ಅದು ಉರುಳಿತು. ಒಳಗಿದ್ದ ಚಿಕ್ಕನಂಜ "ಅಯ್ಯೋ, ಏನನ್ಯಾಯ! ನಾನು ಇನ್ನೂ ಎಷ್ಟು ಸಣ್ಣವನು! ಈಗಾಗಲೇ ಸಾಯುತ್ತೇನಲ್ಲಾ!" ಎಂದು ಗಟ್ಟಿಯಾಗಿ ನಿಟ್ಟುಸಿರು ಬಿಟ್ಟ.

ದನಕಾಯುವವನು ಇದನ್ನು ಕೇಳಿ, "ನಾನು ಇಷ್ಟು ಮುದುಕನಾಗಿದ್ದೇನೆ. ಆದರೂ ನನಗೆ ಸಾವು ಬರಲೊಲ್ಲದು. ನಾನೆಂತಹ ಅದೃಷ್ಟಹೀನ!" ಎಂದ.

ಚಿಕ್ಕನಂಜ "ಈ ಚೀಲದ ಬಾಯಿ ಬಿಚ್ಚು. ನೀನು ಇದರೊಳಗೆ ಬಂದು ಕುಳಿತುಕೊ, ಬಹಳ ಬೇಗ ಸಾಯುವೆ" ಎಂದ.

"ಸದ್ಯ, ಅಷ್ಟಾದರೆ ಸಾಕು, ನಿನ್ನ ದಯದಿಂದ!" ಎಂದು ಮುದುಕ ಚೀಲವನ್ನು ತೆರೆದ. ಚಿಕ್ಕನಂಜ ಕೂಡಲೇ ಹೊರಕ್ಕೆ ನೆಗೆದ. ಮುದುಕ ಚೀಲದ

ಒಳಕ್ಕೆ ತೂರುತ್ತಾ "ನನ್ನ ದನಗಳನ್ನು ಜೋಪಾನವಾಗಿ ನೋಡಿಕೊಳ್ಳುವೆ ತಾನೆ? ಎಂದ.

"ಓಹೋ" ಎನ್ನುತ್ತಾ, ಚಿಕ್ಕನಂಜ ಚೀಲದ ಬಾಯನ್ನು ಮೊದಲಿನಂತೆಯೇ ಕಟ್ಟಿಬಿಟ್ಟು ದನಗಳೊಡನೆ ಹೊರಟುಹೋದ.

ದೊಡ್ಡನಂಜ ಗುಡಿಯಿಂದ ಬಂದು ಚೀಲವನ್ನು ಹೆಗಲ ಮೇಲಕ್ಕೆ ಏರಿಸಿಕೊಂಡ. ಅದು ಬಹಳ ಹಗುರವಾಗಿಬಿಟ್ಟಿರುವಂತೆ ಕಂಡಿತು. ಏಕೆಂದರೆ ಮುದುಕ ಚಿಕ್ಕನಂಜನ ಭಾರದಲ್ಲಿ ಅರ್ಧ ಕೂಡ ಇರಲಿಲ್ಲ.

ದೊಡ್ಡನಂಜ "ಇವನು ಈಗ ಎಷ್ಟು ಹಗುರವಾಗಿ ಕಾಣುತ್ತಾನೆ! ಹಾ! ಇದು ನಾನು ಗುಡಿಗೆ ಹೋಗಿಬಂದುದರ ಫಲವಿರಬೇಕು!" ಎಂದುಕೊಂಡ. ಮುಂದೆ ನಡೆದು ನದಿಗೆ ಬಂದಾಗ, ಚೀಲದೊಳಗಿದ್ದವನು ಚಿಕ್ಕನಂಜ ಎಂದೇ ನಂಬಿ, ಅದನ್ನು ಎತ್ತಿ ನೀರಿಗೆಸೆದ. "ಬಿದ್ದಿರು ಅಲ್ಲಿ! ಇನ್ನು ನಿನ್ನ ಕಾಟ ತಪ್ಪಿತು!" ಎಂದು ಕೂಗಿದ.

ಅನಂತರ ಅವನು ಮನೆಗೆ ಹಿಂದಿರುಗಿ ನಡೆಯುತ್ತ, ಎರಡು ದಾರಿಗಳು ಕೂಡುವ ಸ್ಥಳಕ್ಕೆ ಬಂದ. ಅಲ್ಲಿ ಚಿಕ್ಕನಂಜ ತನ್ನ ದನಗಳನ್ನು ಕಾಯುತ್ತಾ ಸಂತೋಷದಿಂದ ಹಾಡುತ್ತಾ ನಿಂತಿದ್ದ. ದೊಡ್ಡನಂಜ ಆಶ್ಚರ್ಯದಿಂದ "ಇದೇನು! ನಾನು ನಿನ್ನನ್ನು ಮುಳುಗಿಸಲಿಲ್ಲವೆ?" ಎಂದು ಕೇಳಿದ.

ಚಿಕ್ಕನಂಜ "ಹೌದು. ಅರ್ಧ ಗಂಟೆಯ ಹಿಂದೆ ನೀನು ನನ್ನನ್ನು ನದಿಯೊಳಕ್ಕೆ ಎಸೆದೆ" ಎಂದ.

"ಆದರೆ ನಿನಗೆ ಈ ಸೊಗಸಾದ ದನಗಳೆಲ್ಲಾ ಎಲ್ಲಿ ಸಿಕ್ಕಿದವು?" ಎಂದು ದೊಡ್ಡನಂಜ ಕೇಳಿದ.

ಅದಕ್ಕೆ ಚಿಕ್ಕನಂಜ "ಇದರ ಕಥೆಯನ್ನೆಲ್ಲಾ ನಿನಗೆ ಹೇಳುತ್ತೇನೆ, ಕೇಳು. ನನ್ನನ್ನು ಮುಳುಗಿಸಿ ನೀನು ಬಹಳ ಉಪಕಾರಮಾಡಿದೆ. ನೀನು ನನ್ನನ್ನು ನದಿಯಲ್ಲಿ ಮುಳುಗಿಸಿದ ಕೂಡಲೆ ನಾನು ತಳಕ್ಕೆ ಹೋದೆ. ಆದರೆ ನನಗೆ ಯಾವ ವಿಧವಾದ ಅಪಾಯವೂ ಆಗಲಿಲ್ಲ. ನಾನು ನದಿಯ ತಳದಲ್ಲಿ ಬೆಳೆಯುವ ಮೃದುವಾದ ಹುಲ್ಲಿನ ಮೇಲೆ ಬಿದ್ದೆ. ಕ್ಷಣಕಾಲದಲ್ಲಿ ಚೀಲದ ಬಾಯಿ ತೆರೆಯಿತು. ಮಂಜಿನಂತೆ ಬಿಳುಪಾದ ಬಟ್ಟೆಗಳನ್ನು ಉಟ್ಟಿದ್ದ ಒಬ್ಬ ಚೆಲುವೆ ನನ್ನ ಕಡೆಗೆ ಬಂದಳು. ಅವಳ ತಲೆಯ ಕೂದಲು ನೀರಿನಲ್ಲಿ

ಒಡ್ಡೆಯಾಗಿತ್ತು. ಆ ಕೂದಲಿನ ಸುತ್ತ ಹಸುರೆಲೆಗಳ ಹಾರವಿತ್ತು. ಅವಳು ನನ್ನ ಕೈಯನ್ನು ಹಿಡಿದು 'ಚಿಕ್ಕನಂಜ, ಈಗಲಾದರೂ ಬಂದೆಯಲ್ಲ. ಇಗೋ, ಇಲ್ಲೊಂದು ದನದ ಮಂದೆಯಿದೆ. ಮುಂದೆ—ಸುಮಾರು ಒಂದು ಮೈಲಿಯ ಆಚೆ—ಇನ್ನೊಂದು ಮಂದೆಯಿದೆ' ಎಂದು ಹೇಳಿದಳು. ಆ ನದಿ ಸಮುದ್ರದಲ್ಲಿ ವಾಸಿಸುವ ಜನರಿಗೆ ಓಡಾಡಲು ಹೆದ್ದಾರಿಯಾಗಿತ್ತೆಂದು ನನಗೆ ಆಗ ಗೊತ್ತಾಯಿತು. ಅಲ್ಲಲ್ಲಿ ಜನಗಳ ಗುಂಪು ಕಂಡುಬಂತು. ಅವರು ತಮ್ಮ ಮಂದೆಗಳೊಂದಿಗೆ ಸಮುದ್ರದಿಂದ ಹೊರಟು ನದಿಯ ಮೂಲಕ ಭೂಮಿಗೆ ಹೋಗುತ್ತಿದ್ದರು. ನದಿಯ ತಳದಲ್ಲಿ ಬಹಳ ಸೊಗಸಾದ ಎಳೆಯ ಹುಲ್ಲೂ ಹೂಗಳೂ ಬೆಳೆದಿದ್ದವು. ಆಹಾ! ಅಲ್ಲಿದ್ದ ಜನಗಳು ಎಷ್ಟು ಚೆಲುವರು! ಗುಡ್ಡಗಳ ಮೇಲೂ ಹಳ್ಳಿಗಳಲ್ಲೂ ಮೇಯುತ್ತಿದ್ದ ದನಗಳು ಎಷ್ಟು ಚೆನ್ನಾಗಿದ್ದವು!" ಎಂದ.

ದೊಡ್ಡನಂಜ "ಎಂತಹ ಅದೃಷ್ಟವಂತನೋ ನೀನು! ನಾನೂ ನದಿಯೊಳಕ್ಕೆ ಹೋದರೆ ನನಗೂ ಏನಾದರೂ ದನಗಳು ದೊರೆತಾವೇನೋ?" ಎಂದ.

"ಬೇಕಾದಷ್ಟು ದೊರೆಯುತ್ತವೆ. ಆದರೆ ನಾನು ನಿನ್ನನ್ನು ಚೀಲದಲ್ಲಿ ಹಾಕಿ ಹೊತ್ತುಕೊಂಡು ಹೋಗಲಾರೆ. ನೀನೇ ನದಿಯ ಹತ್ತಿರ ಬಂದು ಚೀಲದೊಳಗೆ ಕುಳಿತುಕೊಂಡರೆ, ನಾನು ಅದನ್ನು ಬಹಳ ಸಂತೋಷದಿಂದ ನೀರಿಗೆ ಎಸೆಯುತ್ತೇನೆ" ಎಂದು ಚಿಕ್ಕನಂಜ ಹೇಳಿದ.

ದೊಡ್ಡನಂಜ ಅದಕ್ಕೆ ಒಪ್ಪಿದ. "ಅಷ್ಟುಮಾಡಿದರೆ ಸಾಕು, ನಿನ್ನಿಂದ ನನಗೆ ಬಹಳ ಉಪಕಾರವಾದ ಹಾಗೆ ಆಗುತ್ತದೆ. ಅಲ್ಲೇನಾದರೂ ದನ ಸಿಕ್ಕದಿದ್ದರೆ ಹೊರಗೆ ಬಂದು ನಿನಗೆ ಚೆನ್ನಾಗಿ ಬಿಗಿದುಬಿಡುತ್ತೇನೆ" ಎಂದು ಎಚ್ಚರಿಸಿದ.

"ಚಿಂತೆಯಿಲ್ಲ, ಹೆದರಬೇಡ" ಎಂದು ಚಿಕ್ಕನಂಜ ದೊಡ್ಡನಂಜನನ್ನು ನದಿಗೆ ಕರೆತಂದ. ಅವರು ನದಿಯ ಹತ್ತಿರಕ್ಕೆ ಬಂದ ಕೂಡಲೆ ಬಹಳವಾಗಿ ಬಾಯಾರಿದ್ದ ದನಗಳೆಲ್ಲಾ ನೀರಿಗೆ ಓಡಿದವು. ಅವನ್ನು ತೋರಿಸಿ ಚಿಕ್ಕನಂಜ "ನೋಡು, ಅವು ಎಷ್ಟು ಅವಸರದಿಂದ ಓಡುತ್ತಿವೆ! ಯಾರಿಗಾದರೂ ಮನೆ ಎಂದರೆ ಆಸೆಯಿಲ್ಲವೆ?" ಎಂದ.

"ಬಾ, ಮತ್ತೆ, ಬೇಗ. ನನಗೆ ಸಹಾಯಮಾಡು. ಇಲ್ಲದಿದ್ದರೆ ಒದೆಗಳು ಬಿದ್ದಾವು" ಎಂದು ದೊಡ್ಡನಂಜ ಒಂದು ಎತ್ತಿನ ಬೆನ್ನಿನ ಮೇಲಿದ್ದ ಚೀಲ ದೊಳಗೆ ಹುದುಗಿ ಕುಳಿತುಕೊಂಡ. "ಒಂದು ಕಲ್ಲನ್ನು ತಂದಿಡು; ಇಲ್ಲ ದಿದ್ದರೆ ನಾನು ಮುಳುಗದೆ ಹೋಗಬಹುದು" ಎಂದ.

ಚಿಕ್ಕನಂಜ "ಓ, ಅಂಥದೇನು ಹೆದರಿಕೆಯಿಲ್ಲ" ಎಂದ. ಆದರೂ ಒಂದು ದೊಡ್ಡ ಕಲ್ಲನ್ನೇ ತಂದು ಚೀಲದೊಳಗಿಟ್ಟು, ಅದರ ಬಾಯನ್ನು ಬಲವಾಗಿ ಕಟ್ಟಿ, ಅದನ್ನು ನೀರಿನೊಳಕ್ಕೆ ನೂಕಿದ.

ಚೀಲ "ಗುಳುಂ" ಎಂದು ಮುಳುಗಿತು! ದೊಡ್ಡನಂಜ ನದಿಯ ತಳಕ್ಕೆ ನೇರವಾಗಿ ಹೋದ!

"ಅವನಿಗೆ ಅಲ್ಲಿ ದನವೂ ಸಿಕ್ಕುವುದಿಲ್ಲ ಗಿನವೂ ಸಿಕ್ಕುವುದಿಲ್ಲ!" ಎಂದುಕೊಳ್ಳುತ್ತಾ ಚಿಕ್ಕನಂಜ ತನ್ನ ಮಂದೆಯನ್ನು ಮನೆಯ ಕಡೆಗೆ ಹೊಡೆದು ಕೊಂಡು ಬಂದ.

# ಚಕ್ರವರ್ತಿಯ ಹೊಸ ಬಟ್ಟೆಗಳು

ಅನೇಕ ವರ್ಷಗಳ ಹಿಂದೆ ಒಬ್ಬ ಚಕ್ರವರ್ತಿಯಿದ್ದ. ಅವನಿಗೆ ಹೊಸ ಬಟ್ಟೆ ಕಂಡರೆ ಬಹಳ ಆಸೆ. ತನ್ನ ಹಣವನ್ನೆಲ್ಲಾ ಬಟ್ಟೆಗಾಗಿಯೇ ವೆಚ್ಚ ಮಾಡುತ್ತಿದ್ದ. ತಾನು ಯಾವಾಗಲೂ ಸೊಗಸಾಗಿ ಕಾಣಬೇಕೆಂಬುದೇ ಅವನ ಇಷ್ಟ. ಅವನಿಗೆ ಸಂಗೀತ, ನಾಟ್ಯ, ಬೇಟೆ—ಯಾವುದೂ ಬೇಕಾಗಿರಲಿಲ್ಲ. ಅವನಿಗೆ ಬೇಕಾಗಿದ್ದುದು ಒಂದೇ: ಹೊಸ ಬಟ್ಟೆಗಳನ್ನು ಧರಿಸಿ, ಗಾಡಿಯಲ್ಲಿ ಕುಳಿತು ಸವಾರಿ ಹೊರಟು ಜನರಿಗೆ ತೋರಿಸಿಕೊಳ್ಳುವುದು. ದಿವಸದ ಪ್ರತಿಯೊಂದು ಗಂಟೆಗೂ ಅವನು ಬೇರೆಬೇರೆ ಅಂಗಿ ಇಟ್ಟಿದ್ದ. ಯಾರಾದರೂ "ರಾಜ ಎಲ್ಲಿದ್ದಾನೆ?" ಎಂದರೆ "ಮಂತ್ರಿಗಳೊಡನೆ ಆಲೋಚಿಸುತ್ತಿದ್ದಾನೆ" ಎನ್ನುವ ಹಾಗೆಯೇ, ಈ ದೊರೆಯ ವಿಷಯದಲ್ಲಿ "ಚಕ್ರವರ್ತಿ ಬಟ್ಟೆಹಾಕಿಕೊಳ್ಳುತ್ತಿದ್ದಾನೆ" ಎನ್ನುತ್ತಿದ್ದರು.

ಅವನು ವಾಸವಾಗಿದ್ದ ಪಟ್ಟಣ ದೊಡ್ಡದು. ಅದು ಯಾವಾಗಲೂ ಸಂತೋಷ ಸಂಭ್ರಮಗಳಿಂದ ತುಂಬಿರುತ್ತಿತ್ತು. ಅಲ್ಲಿಗೆ ಪ್ರತಿದಿನವೂ ಅನೇಕ ಹೊಸಬರು ಬಂದು ಹೋಗುತ್ತಿದ್ದರು. ಒಂದು ದಿನ ಇಬ್ಬರು ಮೋಸಗಾರರು ಬಂದರು. ಅವರು "ನಾವು ನೇಯ್ಗೆಗಾರರು. ಇತರರ ಊಹನೆಗೆ ಕೂಡ ನಿಲುಕಲಾರದಂತಹ ಮೃದುವಾದ ಬಟ್ಟೆಗಳನ್ನು ನಾವು ನೇಯಬಲ್ಲೆವು" ಎಂದು ಹೇಳಿಕೊಂಡರು. "ನಮ್ಮ ಬಟ್ಟೆಗಳ ಬಣ್ಣಗಳೂ, ಅಚ್ಚಿನ ರೀತಿಗಳೂ ಅಸಾಮಾನ್ಯವಾದ ಸೊಬಗನ್ನು ಹೊಂದಿರುತ್ತವೆ. ಅಷ್ಟೇ ಅಲ್ಲ, ತಮ್ಮ ಅಧಿಕಾರ ಪದವಿಗಳಿಗೆ ಅನರ್ಹರಾದ ಅಥವಾ ಅತಿ ದಡ್ಡರಾದ ಯಾರಾದರೂ ನಾವು ನೇಯ್ದ ಬಟ್ಟೆಗಳನ್ನು ನೋಡಲು ಹೋದರೆ ಅವು ಅವರ ಕಣ್ಣಿಗೆ ಅದೃಶ್ಯವಾಗಿಬಿಡುತ್ತವೆ. ಅವುಗಳಿಗೆ ಅಂತಹ ಅದ್ಭುತವಾದ ಗುಣವಿರುತ್ತದೆ" ಎಂದರು.

ಚಕ್ರವರ್ತಿ ಇವರ ಮಾತನ್ನು ಕೇಳಿ, "ಅವು ಬಹಳ ಒಳ್ಳೆಯ ಬಟ್ಟೆಗಳಿರಬೇಕು! ನಾನು ಅವನ್ನು ಧರಿಸಿದರೆ ನನ್ನ ರಾಜ್ಯದಲ್ಲಿ ಯಾರು ಯಾರು ತಮ್ಮ ಅಧಿಕಾರ ಸ್ಥಾನಗಳಿಗೆ ಅಯೋಗ್ಯರು ಎಂಬುದನ್ನು ಸುಲಭವಾಗಿ

ಕಂಡುಹಿಡಿಯಬಹುದು; ಬುದ್ಧಿವಂತರಾರು ದಡ್ಡರಾರು ಎಂಬುದನ್ನು ತಿಳಿದು ಕೊಳ್ಳಬಹುದು. ಇದರಿಂದ ಬಹಳ ಉಪಯೋಗವಾಗುತ್ತದೆ. ಈ ಬಟ್ಟೆಯನ್ನು ಕೂಡಲೆ ನೇಯಿಸಿಬಿಡಬೇಕು" ಎಂದು ಯೋಚಿಸಿದ. ಆ ಮೋಸಗಾರರಿಬ್ಬರಿಗೂ ಹೇರಳವಾಗಿ ಹಣಕೊಟ್ಟು, ಅವರು ತತ್‍ಕ್ಷಣವೇ ತಮ್ಮ ಕೆಲಸವನ್ನು ಆರಂಭಿಸಬೇಕು ಎಂದು ಆಜ್ಞಾಪಿಸಿದ.

ಆ ಮೋಸಗಾರರು ಕೂಡಲೇ ಎರಡು ಮಗ್ಗ ಹಾಕಿ ಕೆಲಸಮಾಡುತ್ತಿರುವಂತೆ ನಟಿಸಿದರು. ಅವರ ಮಗ್ಗಗಳ ಮೇಲೆ ಏನೂ ಇರಲೇ ಇಲ್ಲ. ಆದರೆ ಮಾತ್ರ ಅವರುಅತ್ಯುತ್ತಮವಾದ ರೇಷ್ಮೆಯ ದಾರವನ್ನೂ ಅತ್ಯಂತ ಬೆಲೆ ಬಾಳುವ ಜರತಾರಿಯನ್ನೂ ತರಿಸಿಕೊಳ್ಳುತ್ತಿದ್ದರು. ಇದೆಲ್ಲವನ್ನೂ ಎಲ್ಲೋ ಮುಚ್ಚಿಟ್ಟುಕೊಂಡು, ಏನೂ ಇಲ್ಲದ ಬರಿಯ ಮಗ್ಗಗಳ ಮುಂದೆ ಕುಳಿತು ರಾತ್ರಿ ಬಹಳ ಹೊತ್ತಿನವರೆಗೂ ಕೆಲಸಮಾಡುತ್ತಿರುವಂತೆ ತೋರಿಸಿ ಕೊಳ್ಳುತ್ತಿದ್ದರು.

ಚಕ್ರವರ್ತಿ "ನೇಯ್ಗೆಯವರ ಕೆಲಸ ಎಲ್ಲಿಯವರೆಗೆ ಮುಂದುವರಿದಿದೆಯೋ ನೋಡಬೇಕು" ಎಂದುಕೊಂಡ. ಆದರೆ ತಮ್ಮ ಪದವಿಗೆ ಅನರ್ಹರಾದವರು ಅದನ್ನು ನೋಡಲಾರರು ಎಂಬ ಯೋಚನೆ ಬಂದಕೂಡಲೆ ಅವನ ಮನಸ್ಸು ಕಳವಳಗೊಂಡಿತು. ತನ್ನ ವಿಚಾರವಾಗಿ ಅವನಿಗೆ ಏನೂ ಹೆದರಿಕೆ ಇರಲಿಲ್ಲ. ಆದರೂಮೊದಲು ಹೋಗಿ ತಿಳಿಯುವುದಕ್ಕೆ ಬೇರೆಯಾರನ್ನಾದರೂ ಕಳುಹಿಸುವುದೇ ಮೇಲು ಎಂದು ನಿರ್ಧರಿಸಿದ.

ಕೊನೆಗೆ ಚಕ್ರವರ್ತಿ "ನನ್ನ ವೃದ್ಧಮಂತ್ರಿ ಪ್ರಮಾಣಿಕ. ಅವನನ್ನು ನೇಯ್ಗೆಯವರ ಬಳಿಗೆ ಕಳುಹಿಸುತ್ತೇನೆ. ಪದಾರ್ಥ ಹೇಗಿದೆಯೆಂದು ಅವನು ಇತರ ಎಲ್ಲರಿಗಿಂತ ಚೆನ್ನಾಗಿ ಪರೀಕ್ಷಿಸಬಲ್ಲ. ಅವನು ಬಹಳ ಬುದ್ಧಿಶಾಲಿ. ಅವನಷ್ಟು ಕರ್ತವ್ಯಪರಿಜ್ಞಾನವಿರುವವರು ಇನ್ನು ಯಾರೂ ಇಲ್ಲ" ಎಂದು ಯೋಚಿಸಿದ.

ರಾಜನ ಆಜ್ಞೆಯ ಪ್ರಕಾರ ಆ ವೃದ್ಧಮಂತ್ರಿ ಇಬ್ಬರು ಮೋಸಗಾರರೂ ಇದ್ದ ಕೊಠಡಿಗೆ ಕಾಲಿಟ್ಟ. ಅವರು ಮೂಗಿನ ಮೇಲೆ ಕನ್ನಡಕ ಸಿಕ್ಕಿಸಿ ಕೊಂಡು ಕೆಲಸಮಾಡುವವರಂತೆ ಕೈಕಾಲಾಡಿಸುತ್ತಿದ್ದರು.

ಮಂತ್ರಿ ಒಳಗೆ ಹೋದ ಒಡನೆ "ದೇವರೇ ಕಾಪಾಡಬೇಕು! ಏನೂ ಕಾಣುವುದೇ ಇಲ್ಲವಲ್ಲಾ!" ಎಂದುಕೊಂಡು ಕಣ್ಣುಗಳೆರಡನ್ನೂ ಅಗಲವಾಗಿ ತೆರೆದು ನೋಡಿದ. ತುಂಬ ನೋಡಿದ. ಏನೂ ಕಾಣಲಿಲ್ಲ. ಆದರೆ ಬಾಯಿ ಬಿಟ್ಟು ಹಾಗೆ ಹೇಳಲು ಅವನಿಗೆ ಧೈರ್ಯವಿರಲಿಲ್ಲ

ಮೋಸಗಾರರಿಬ್ಬರೂ ಅವನನ್ನು "ದಯವಿಟ್ಟು ಮುಂದೆ ಬಂದು ನೋಡ ಬೇಕು" ಎಂದು ಬೇಡಿಕೊಂಡರು. "ಬಟ್ಟೆಯ ಬಣ್ಣಗಳೂ ರೀತಿಯೂ ಚೆನ್ನಾಗಿಲ್ಲವೆ?" ಎಂದು ಕೇಳಿದರು. ಅನಂತರ ಬರಿದಾಗಿಯೇ ಇದ್ದ ಮಗ್ಗದ ಕಡೆಗೆ ಕೈತೋರಿಸಿದರು. ಪಾಪ, ಆ ಮುದುಕ ಮಂತ್ರಿ ಕಣ್ಣುಗಳನ್ನು ಮೊರದಗಲ ತೆರೆಯುತ್ತಾ ನೋಡಿದ. ಆದರೆ ಅವನಿಗೆ ಏನೂ ಕಾಣಲಿಲ್ಲ. ನೋಡಲು ಅಲ್ಲಿ ಏನೂ ಇರಲೇ ಇಲ್ಲ.

ಆಗ ಮಂತ್ರಿ "ಅಯ್ಯೋ ದೇವರೆ! ನಾನು ಇಷ್ಟು ಮೂಢನೆ? ಇದು ನನಗೆ ಗೊತ್ತೇ ಇರಲಿಲ್ಲವಲ್ಲ! ಇತರರಿಗೂ ಗೊತ್ತಾಗಕೂಡದು! ನಾನು ನನ್ನ ಕೆಲಸಕ್ಕೆ ಅನರ್ಹನೆ? ಇಲ್ಲ. ನಾನು ಬಟ್ಟೆಯನ್ನು ನೋಡಲಾರದೆ ಹೋದೆನೆಂದು ಯಾರ ಎದುರಿಗೂ ಹೇಳಕೂಡದು! ಹೇಳಿದರೆ ನನ್ನ ಗತಿ ತೀರಿತು!" ಎಂದು ಯೋಚಿಸಿಕೊಂಡ.

"ಇದರ ವಿಷಯವಾಗಿ ನೀವು ಹೇಳುವುದು ಏನೂ ಇಲ್ಲವೆ?" ಎಂದು ನೇಯ್ಗೆಯವರಲ್ಲಿ ಒಬ್ಬ ಕೇಳಿದ.

ವೃದ್ಧಮಂತ್ರಿ ತನ್ನ ಕನ್ನಡಕಗಳ ಗಾಜಿನ ಮೂಲಕ ದುರುಗುಟ್ಟಿ ನೋಡುತ್ತಾ "ಓಹೋ! ಸೊಗಸಾಗಿದೆ! ಬಹಳ ಸೊಗಸಾಗಿದೆ! ಏನು ರೀತಿ! ಎಂಥ ಬಣ್ಣ! ಖಂಡಿತವಾಗಿಯೂ ಇದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ದೊರೆಗೆ ಹೇಳುತ್ತೇನೆ" ಎಂದು ಉತ್ತರಕೊಟ್ಟ.

ಮೋಸಗಾರರು ಇನ್ನೂ ಹೆಚ್ಚು ಹಣ, ಇನ್ನೂ ಹೆಚ್ಚು ರೇಷ್ಮೆ ಜರತಾರಿ ಕೇಳಿದರು. ಅವೆಲ್ಲವೂ ತಮ್ಮ ನೇಯ್ಗೆಗೆ ಬೇಕಾಗಿವೆ ಎಂದು ಅವರು ಹೇಳಿದರು. ಕಡೆಗೆ ಎಲ್ಲವನ್ನೂ ತಮ್ಮ ಜೇಬಿಗೇ ಸೇರಿಸಿದರು. ಮಗ್ಗದ ಮೇಲೆ ಒಂದು ಎಳೆ ದಾರ ಕೂಡ ಇರಲಿಲ್ಲ. ಆದರೂ ಮೊದಲಿನಂತೆಯೇ ಬರಿಯ ಮಗ್ಗಗಳ ಮುಂದೆ ಕುಳಿತು ಕೆಲಸಮಾಡುತ್ತಿದ್ದರು.

ಚಕ್ರವರ್ತಿ ನೇಯ್ಗೆಯ ಕೆಲಸ ಎಷ್ಟರ ಮಟ್ಟಿಗೆ ನಡೆದಿತ್ತು ಎಂಬುದನ್ನೂ ಬಟ್ಟೆ ಎಂದು ಸಿದ್ಧವಾಗಬಹುದು ಎಂಬುದನ್ನೂ ನೋಡುವುದಕ್ಕೆ ಇನ್ನೊಬ್ಬ ಅಧಿಕಾರಿಯನ್ನು ಕಳುಹಿಸಿದ. ಇವನೂ ಪ್ರಾಮಾಣಿಕನೇ. ಇವನಿಗೂ ಮೊದಲಿನವನಂತೆಯೇ ಆಯಿತು. ಪಾಪ, ನೋಡಿದ, ನೋಡಿದ, ನೋಡೇ ನೋಡಿದ! ಅಲ್ಲಿ ಏನಾದರೂ ಇದ್ದಿದ್ದರೆ ತಾನೆ ಅವನಿಗೆ ಕಾಣಿಸುವುದು ?

ಮೋಸಗಾರರು "ಬಟ್ಟೆ ಚೆನ್ನಾಗಿಲ್ಲವೆ ?" ಎಂದು ಕೇಳಿದರು ಅಲ್ಲಿ ಇರದಿದ್ದ ಬಟ್ಟೆಯನ್ನು ತೋರಿಸಿ, ಅದರ ಸೌಂದರ್ಯವನ್ನು ವರ್ಣಿಸಿದರು.

ಆತ "ನಾನು ನಿಜವಾಗಿಯೂ ತಿಳಿಗೇಡಿಯಲ್ಲ! ಇದು ನನ್ನ ಅಧಿಕಾರದ ತಪ್ಪಿರಬೇಕು. ನಾನು ಅದಕ್ಕೆ ಅನರ್ಹನೆ? ಛೆ! ಛೆ! ಎಲ್ಲಾದರೂ ಉಂಟೆ? ಈ ವಿಷಯ ಯಾರಿಗೂ ಹೇಳಬಾರದು" ಎಂದುಕೊಂಡ. ಆದ್ದರಿಂದ ಬಟ್ಟೆಯನ್ನು ತಾನು ನೋಡದಿದ್ದರೂ ಬಹಳವಾಗಿ ಹೊಗಳಿದ. "ಅದರ ಬಣ್ಣಗಳೂ ನೇಯ್ಗೆಯ ರೀತಿಯೂ ಚೆನ್ನಾಗಿವೆ" ಎಂದು ಹೇಳಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದ. ಚಕ್ರವರ್ತಿಯ ಬಳಿಗೆ ಹೋಗಿ "ನಿಜ, ಬಹಳ ಸೊಗಸಾಗಿದೆ!" ಎಂದ.

ಪಟ್ಟಣದ ಜನಗಳೆಲ್ಲಾ ಆ ಅಮೂಲ್ಯವಾದ ವಸ್ತುವನ್ನು ಕುರಿತು ಮಾತಾಡಿಕೊಳ್ಳುತ್ತಿದ್ದರು. ಅದು ಮಗ್ಗದ ಮೇಲಿರುವಾಗಲೆ ಅದನ್ನು ನೋಡಬೇಕೆಂದು ಚಕ್ರವರ್ತಿಗೆ ಅಭಿಲಾಷೆಯಾಯಿತು. ಅನೇಕ ಜನರನ್ನು ಆರಿಸಿ ತನ್ನೊಡನೆ ಕರೆದುಕೊಂಡು ಹೋದ. ದಾರ, ಎಳೆ ಏನೂ ಇಲ್ಲದೆ ಅತ್ಯುತ್ಸಾಹದಿಂದಲೂ ಮಹಾ ಸಾಮರ್ಥ್ಯದಿಂದಲೂ ಆ ಮೋಸಗಾರರು ನೇಯುತ್ತಿದ್ದರು. ಚಕ್ರವರ್ತಿ ಅವರ ಬಳಿಗೆ ಹೋದ. ಹಿಂದೊಮ್ಮೆ ಬಟ್ಟೆಯನ್ನು ನೋಡಿದ್ದ ಅಧಿಕಾರಿಗಳಿಬ್ಬರೂ ಅಲ್ಲೇ ಹಿಂದುಗಡೆ ಇದ್ದರು.

ಚಕ್ರವರ್ತಿ "ಏನಿದು ? ನನಗೆ ಏನೂ ಕಾಣುವುದೇ ಇಲ್ಲವಲ್ಲ! ಏನು ಭಯಂಕರವಪ್ಪ ಇದು! ನಾನು ಇಂಥ ಹೆಡ್ಡನೆ ? ಚಕ್ರವರ್ತಿಯಾಗಿರಲು ನನಗೆ ಯೋಗ್ಯತೆ ಇಲ್ಲವೆ? ಹಾಗಾದರೆ ಎಂಥ ದುಃಖಕರವಾದ ಸಂಗತಿ!" ಎಂದು ಚಿಂತಿಸಿ, ಕೊನೆಗೆ "ಓಹೋ ಬಹಳ ಚೆನ್ನಾಗಿದೆ! ಬಹಳ ಚೆನ್ನಾಗಿದೆ! ಒಪ್ಪಿದೆ! ಎಂದು ತೃಪ್ತಿಪಟ್ಟವನಂತೆ ತಲೆದೂಗಿ ಬರಿಯ ಮಗ್ಗವನ್ನು ದುರುಗುಟ್ಟಿ

ನೋಡಿದ. ತನಗೆ ಏನೂ ಕಾಣಲಿಲ್ಲವೆಂದು ಹೇಳಲು ಅವನಿಗೂ ಇಷ್ಟವಿರಲಿಲ್ಲ. ಅವನ ಜೊತೆಯಲ್ಲಿದ್ದವರೆಲ್ಲ ನೋಡಿಯೇ ನೋಡಿದರು. ಅವರೇನೂ ಇತರರಿಗಿಂತ ಹೆಚ್ಚು ಕಾಣಲಿಲ್ಲ. ಆದರೂ ಚಕ್ರವರ್ತಿಯಂತೆಯೇ ಅವರೂ "ಬಹಳ ಚೆನ್ನಾಗಿದೆ!" ಎಂದು ಕೂಗಿ, ಸ್ವಲ್ಪ ದಿನಗಳಲ್ಲೇ ನಡೆಯಬೇಕಾಗಿದ್ದ ಆತನ ಮೆರವಣಿಗೆಯ ಸಮಯದಲ್ಲಿ ಆ ಹೊಸ ಬಟ್ಟೆಯನ್ನು ಮೊದಲ ಸಾರಿ ಆತ ಧರಿಸಬೇಕೆಂದು ಸಲಹೆ ಕೊಟ್ಟರು. "ಬಹಳ ಸೊಗಸಾಗಿದೆ !ಒಳ್ಳೆಯ ಅಭಿರುಚಿಯನ್ನು ತೋರಿಸುತ್ತದೆ! ಉತ್ಕೃಷ್ಟವಾಗಿದೆ! ಅಮೋಘವಾಗಿದೆ!" ಎಂಬ ಮಾತು ಬಾಯಿಂದ ಬಾಯಿಗೆ ಹೋದವು. ಸುತ್ತಾಮುತ್ತಾ ಎಲ್ಲಿ ನೋಡಿದರೂ ಸಂತೋಷವಿದ್ದಂತೆ ತೋರಿಬರುತ್ತಿತ್ತು. ಚಕ್ರವರ್ತಿ ಆ ಮೋಸಗಾರರಿಗೆ "ಸಾರ್ವಭೌಮನ ಆಸ್ಥಾನದ ನೇಯ್ಗೆಗಾರರು" ಎಂಬ ಬಿರುದನ್ನು ದಯಪಾಲಿಸಿದ.

ಮೆರವಣಿಗೆ ನಡೆಯಬೇಕಾಗಿದ್ದ ದಿನದ ಹಿಂದಿನ ರಾತ್ರಿಯೆಲ್ಲಾ ಮೋಸಗಾರರು ಎಚ್ಚೆತ್ತಿದ್ದು ಕೆಲಸ ಮಾಡುವವರಂತೆ ನಟಿಸಿ ಹದಿನಾರಕ್ಕಿಂತಲೂ ಹೆಚ್ಚಿಗೆ ದೀವಿಗೆಗಳನ್ನು ಹೊತ್ತಿಸಿಟ್ಟಿದ್ದರು. ಅವರು ಚಕ್ರವರ್ತಿಯ ಹೊಸ ಬಟ್ಟೆಗಳನ್ನು ಪೂರೈಸಲು ಕೆಲಸಮಾಡುತ್ತಿದ್ದಂತೆ ಜನರಿಗೆಲ್ಲಾ ತೋರುತ್ತಿತ್ತು. ಬಟ್ಟೆಯನ್ನು ಮಗ್ಗದಿಂದ ಹೊರಕ್ಕೆ ತೆಗೆಯುವಂತೆ ಅವರು ನಟಿಸಿದರು. ದೊಡ್ಡ ಕತ್ತರಿಗಳನ್ನು ತೆಗೆದುಕೊಂಡು ಗಾಳಿಯಲ್ಲಿ ಕತ್ತರಿಸಿದರು. ದಾರವಿಲ್ಲದ ಸೂಜಿಗಳಿಂದ ಹೊಲಿಗೆ ಕೆಲಸ ಮಾಡಿದರು. ಕೊನೆಗೆ "ಈಗ ಬಟ್ಟೆಗಳು ಸಿದ್ಧವಾಗಿವೆ" ಎಂದರು.

ಚಕ್ರವರ್ತಿ ತನ್ನ ಆಸ್ಥಾನಿಕರೊಡನೆ ಬಂದ ಮೋಸಗಾರರಿಬ್ಬರೂ ತಾವು ಕೈಯಲ್ಲಿ ಏನೋ ಹಿಡಿದಿರುವಂತೆ ಒಂದು ಕೈಯನ್ನೆತ್ತಿ, "ನೋಡಬೇಕು, ಮಹಾಪ್ರಭು, ಇದೋ ಷರಾಯಿ! ಇದೋ ಅಂಗಿ! ಇದೋ ನಿಲವಂಗಿ!" ಇತ್ಯಾದಿಯಾಗಿ ಹೇಳಿದರು. "ಬಟ್ಟೆಯೆಲ್ಲಾ ಜೇಡನ ಜಾಲದ ಹಾಗೆ ಹಗುರವಾಗಿದೆ. ಇದನ್ನು ಉಟ್ಟರೆ ಮೈಮೇಲೆ ಏನೂ ಇಲ್ಲವೇನೋ ಎನ್ನುವಂತೆ ತೋರುತ್ತದೆ. ಇದರ ಸೊಗಸು ಅಂತಹುದು!" ಎಂದರು.

ಅಲ್ಲಿ ನೆರೆದಿದ್ದ ಆಸ್ಥಾನಿಕರೆಲ್ಲರೂ "ನಿಜ! ನಿಜ!" ಎಂದರು. ಆದರೆ ಅವರಾರಿಗೂ ಏನೂ ಕಾಣುತ್ತಿರಲಿಲ್ಲ. ಏಕೆಂದರೆ ಕಾಣಲು ಅಲ್ಲಿ ಏನೂಇರಲಿಲ್ಲ.

ಮೋಸಗಾರರು "ಮಹಾಸ್ವಾಮಿಯವರು ಕೃಪೆಮಾಡಿ ತಮ್ಮ ಉಡುಪನ್ನು ತೆಗೆದಿಡಬೇಕು. ಅನಂತರ ನಾವು ಇಲ್ಲಿ—ಈ ನಿಲುಗನ್ನಡಿಯ ಎದುರು ಪ್ರಭುಗಳ ದಿವ್ಯ ದೇಹಕ್ಕೆ ಹೊಸ ಬಟ್ಟೆಗಳನ್ನು ತೊಡಿಸುವೆವು" ಎಂದರು.

ಚಕ್ರವರ್ತಿ ತಾನು ಧರಿಸಿದ್ದ ಉಡುಗೆತೊಡಿಗೆಗಳನ್ನು ತೆಗೆದು ಹಾಕಿದ. ಮೋಸಗಾರರು ಹೊಸ ಬಟ್ಟೆಗಳನ್ನು ಒಂದೊಂದಾಗಿ ಅವನಿಗೆ ಉಡಿಸಿತೊಡಿಸುವಂತೆ ನಟಿಸಿದರು. ಚಕ್ರವರ್ತಿ ಕನ್ನಡಿಯ ಎದುರು ನಿಂತು ತಿರುಗಿತಿರುಗಿ ನೋಡಿಕೊಳ್ಳುತ್ತಿದ್ದ.

"ಆಹಾ! ಎಷ್ಟು ಚೆನ್ನಾಗಿ ಕಾಣುತ್ತವೆ! ಎಷ್ಟರಮಟ್ಟಿಗೆ ಒಪ್ಪುತ್ತವೆ! ಏನು ರೀತಿ! ಏನು ಬಣ್ಣ! ಸೊಗಸಾದ ಉಡುಪು! ಸೊಗಸಾದ ಉಡುಪು!" ಎಂದು ಎಲ್ಲರೂ ಹೊಗಳಿದರು.

ಒಬ್ಬ ಅಧಿಕಾರಿ "ಮೆರವಣಿಗೆಯಲ್ಲಿ ಮಹಾಪ್ರಭುಗಳ ಮೇಲೆ ಹಿಡಿಯುವ ಬಿಳಿಯ ಕೊಡೆಯನ್ನು ಸಿದ್ಧಪಡಿಸಿಕೊಂಡು ಸೇವಕರು ಹೊರಗಡೆ ನಿಂತಿದ್ದಾರೆ" ಎಂದು ಸಾರಿದ.

ಚಕ್ರವರ್ತಿ "ಇಗೋ ಬಂದೆ" ಎಂದು ಉತ್ತರಕೊಟ್ಟ. "ಸರಿಯಾಗಿ ಒಪ್ಪುತ್ತದೆ, ಅಲ್ಲವೆ?" ಎನ್ನುತ್ತಾ ಮತ್ತೊಮ್ಮೆ ಕನ್ನಡಿಯ ಕಡೆ ತಿರುಗಿ ನೋಡಿಕೊಂಡ. ತನ್ನ ವೇಷಭೂಷಣಗಳ ವಿಷಯದಲ್ಲಿ ದೊರೆ ಬಹಳ ಆಸಕ್ತಿ ವಹಿಸುತ್ತಾನೆಂದು ಎಲ್ಲರೂ ತಿಳಿದುಕೊಳ್ಳಲೆಂದು ಅವನ ಅಭಿಲಾಷೆ.

ಹೀಗೆ ಚಕ್ರವರ್ತಿ ರತ್ನಾಭರಣಗಳಿಂದ ಅಲಂಕೃತವಾಗಿದ್ದ ಬಿಳಿಯ ಕೊಡೆಯ ಕೆಳಗೆ ನಗರದ ಬೀದಿಗಳಲ್ಲಿ ಮೆರವಣಿಗೆ ಹೊರಟ. ಅವನನ್ನು ನೋಡಿದವರೆಲ್ಲಾ "ಚಕ್ರವರ್ತಿಯ ಹೊಸ ಉಡುಪು ಎಷ್ಟು ಸೊಗಸಾಗಿದೆ! ಈತನಿಗೆ ಇದು ಎಷ್ಟು ಚೆನ್ನಾಗಿ ಒಪ್ಪುತ್ತದೆ!" ಎಂದು ಮಾತಾಡಿಕೊಂಡರು. ತಮಗೆ ಏನೂ ಕಾಣಲಿಲ್ಲವೆಂದು ಹೇಳಲು ಒಬ್ಬರಿಗೂ ಇಷ್ಟವಿರಲಿಲ್ಲ. ಹಾಗೆ ಮಾಡಿದವನು ತನ್ನ ಪದವಿಗೆ ಅನರ್ಹನೆಂದೋ ಬುದ್ಧಿಹೀನನೆಂದೋ ತೋರಿಸಿಕೊಂಡ ಹಾಗೆ ಆಗುತ್ತಿತ್ತು. ಚಕ್ರವರ್ತಿ ಹಿಂದೆ ಉಪಯೋಗಿಸಿದ್ದ ಬಟ್ಟೆಗಳಾವುವೂ ಈ ದಿವಸದ ಬಟ್ಟೆಗಳಷ್ಟು ಮೆಚ್ಚುಗೆಯನ್ನಾಗಲಿ ಹೊಗಳಿಕೆಯನ್ನಾಗಲಿ ಪಡೆದಿರಲಿಲ್ಲ.

ಮೆರವಣಿಗೆ ಹೀಗೆಯೇ ಸಾಗುತ್ತಿರುವಾಗ, ಒಂದು ಪುಟ್ಟ ಮಗು "ಅವನ ಮೈಮೇಲೆ ಏನೂ ಇಲ್ಲವೇ ಇಲ್ಲವಲ್ಲಪ್ಪ!" ಎಂದು ಕೂಗಿಬಿಟ್ಟಿತು.

ಅದರ ತಂದೆ ತನ್ನ ಪಕ್ಕದಲ್ಲಿದ್ದವನಿಗೆ "ಇಲ್ಲಿ ಸ್ವಲ್ಪ ಕೇಳಿ, ಈ ಹಸುಗೂಸು ಏನು ಹೇಳುತ್ತದೆ!" ಎಂದ. ಹೀಗೆ ಮಗು ಹೇಳಿದುದನ್ನು ಒಬ್ಬ ಇನ್ನೊಬ್ಬನ ಕಿವಿಯಲ್ಲಿ ಉಸುರಿದ.

ಕಟ್ಟಕಡೆಗೆ ಜನರೆಲ್ಲ ಒಟ್ಟಿಗೆ "ಆತನ ಮೈಮೇಲೆ ಏನೂ ಇಲ್ಲವೇ ಇಲ್ಲವಲ್ಲಾ!" ಎಂದು ಕೂಗಿದರು. ಚಕ್ರವರ್ತಿ ಅದನ್ನು ಕೇಳಿ ಖಿನ್ನನಾದ. ಅವರು ಹೇಳಿದ್ದು ನಿಜವೆಂದು ಅವನಿಗೆ ಗೊತ್ತಾಯಿತು. ಆದರೆ "ಮೆರವಣಿಗೆಯನ್ನೆಲ್ಲಾ ಹೀಗೇಯೇ ಮುಗಿಸಿಬಿಡಬೇಕು" ಎಂದು ಮನಸ್ಸಿನಲ್ಲೇ ನಿಶ್ಚಯಿಸಿ ಹಾಗೆಯೇ ಮುಂದೆ ಹೋದ.

# ಹದಿನಾರಾಣೆ ರಾಜಕುಮಾರಿ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜಕುಮಾರನಿದ್ದ. ಅವನಿಗೆ ಒಬ್ಬ ರಾಜಕುಮಾರಿ ಬೇಕಾಯಿತು. ಆದರೆ ಅವಳು ಹದಿನಾರಾಣೆ ರಾಜ ಕುಮಾರಿಯೇ ಆಗಿರಬೇಕಾಗಿತ್ತು. ಅಂಥವಳೊಬ್ಬಳನ್ನು ಹುಡುಕಬೇಕೆಂದು ಅವನು ಪ್ರಪಂಚವನ್ನೆಲ್ಲಾ ಸುತ್ತಿದ. ಆದರೆ ಪ್ರತಿಯೊಬ್ಬರಲ್ಲೂ ಏನಾದರೂ ಒಂದು ನ್ಯೂನತೆ ಇದ್ದೇ ಇತ್ತು. ರಾಜಕುಮಾರಿಯರೇನೋ ಬೇಕಾದ ಹಾಗಿದ್ದರು. ಆದರೆ ಅವರು ಅಪ್ಪಟ ಹದಿನಾರಣೆ ರಾಜಪುತ್ರಿಯರು ಹೌದೋ ಅಲ್ಲವೋ ಎಂಬುದನ್ನು ಕಂಡುಹಿಡಿಯುವುದು ಅವನಿಗೆ ಕಷ್ಟ ವಾಯಿತು. ಅವರಲ್ಲಿ ಯಾವುದಾದರೂ ಒಂದು ತಪ್ಪು ಕಂಡುಬರುತ್ತಲೇ ಇತ್ತು. ಕೊನೆಗೆ ಅವನು ನಿರಾಸೆಯಿಂದ ಸ್ವಸ್ಥಾನಕ್ಕೆ ಹಿಂದಿರುಗಬೇಕಾಯಿತು. ಅವನಿಗೆ ಬಹಳ ವ್ಯಥೆಯಾಯಿತು. ಅವನಿಗೆ ಬೇಕಾದ ಹದಿನಾರಾಣೆ ರಾಜ ಕುಮಾರಿ ಸಿಕ್ಕಲಿಲ್ಲ.

ಒಂದು ದಿನ ಸಂಜೆ ಭಯಂಕರವಾದ ಬಿರುಗಾಳಿ ಎದ್ದಿತು. ಸಿಡಿಲೂ ಮಿಂಚೂ ಆಕಾಶದಲ್ಲಿ ಆರ್ಭಟಿಸಿದವು. ಮಳೆ ಪ್ರಳಯ ಕಾಲದಲ್ಲಿ ಸುರಿಯು ವಂತೆ ಸುರಿಯಿತು. ರಾತ್ರಿ ಭಯಂಕರವಾಗಿತ್ತು.

ಗಾಳಿ ಮಳೆಗಳ ಮಧ್ಯೆ ಯಾರೋ ಬಂದು ಅರಮನೆಯ ಹೊರ ಬಾಗಿಲನ್ನು ತಟ್ಟಿದರು. ರಾಜಕುಮಾರನ ತಂದೆಯಾದ ವೃದ್ಧ ರಾಜನೇ ಬಾಗಿಲು ತೆರೆಯಲು ಹೋದ.

ಹೊರಗೆ ನಿಂತಿದ್ದವಳು ಒಬ್ಬ ರಾಜಕುಮಾರಿ. ಮಳೆಯಿಂದಲೂ ಗಾಳಿಯಿಂದಲೂ ಅವಳ ಸ್ಥಿತಿ ಶೋಚನೀಯವಾಗಿತ್ತು. ಮಳೆಯ ನೀರು ಅವಳ ಕೂದಲಿನಿಂದಲೂ ಬಟ್ಟೆಗಳಿಂದಲೂ ಧಾರಾಕಾರವಾಗಿ ಕೆಳಗಿಳಿದು ಕಾಲಮೇಲೆ ಹರಿಯುತ್ತಿತ್ತು. ತಾನು ಹದಿನಾರಾಣೆ ರಾಜಕುಮಾರಿಯೆಂದು ಅವಳು ಹೇಳಿದಳು.

ರಾಣಿ ಅವಳ ಮಾತನ್ನು ಕೇಳಿ "ಹಾಗಾದರೆ ನೋಡೋಣ" ಎಂದು ಕೊಂಡಳು. ಆದರೆ ಅವಳು ಯಾರಿಗೂ ಏನನ್ನೂ ಹೇಳಲಿಲ್ಲ. ಮಲಗುವ

ಮನೆಗೆ ಹೋಗಿ, ಮಂಚದ ಮೇಲೆ ಹಾಸಿದ್ದ ಬಟ್ಟೆಗಳನ್ನೆಲ್ಲಾ ತೆಗೆದುಹಾಕಿ, ಅದರ ಮೇಲೆ ಸಣ್ಣದೊಂದು ಬಟಾಣಿ ಕಾಳನ್ನು ಇಟ್ಟಳು. ಒಂದರ ಮೇಲೆ ಒಂದರಂತೆ ಇಪ್ಪತ್ತು ಮೆತ್ತನೆಯ ಸುಪ್ಪತ್ತಿಗೆಗಳನ್ನು ಆ ಕಾಳಿನ ಮೇಲೆ ಹಾಸಿ, ಆ ಇಪ್ಪತ್ತು ಸುಪ್ಪತ್ತಿಗಗಳ ಮೇಲೆ ಇನ್ನಿಪ್ಪತ್ತು ಹಂಸದ ಗರಿಗಳಿಂದ ಮಾಡಿದ ಹಾಸುಗೆಗಳನ್ನು ಹರಡಿದಳು. ರಾಜಕುಮಾರಿ ಆ ರಾತ್ರಿ ಅವುಗಳ ಮೇಲೆ ಮಲಗಬೇಕಾಗಿತ್ತು.

ಬೆಳಗಾದಾಗ "ರಾತ್ರಿ ಸುಖವಾಗಿ ಮಲಗಿದ್ದೆಯಾ?" ಎಂದು ಅವಳನ್ನು ಕೇಳಿದರು.

ರಾಜಕುಮಾರಿ "ಅಯ್ಯಯ್ಯೋ! ಆ ಕಷ್ಟ ಯಾರಿಗೂ ಬೇಡ! ರಾತ್ರಿಯೆಲ್ಲಾ ಒಂದು ಅರೆಕ್ಷಣ ಕೂಡ ಕಣ್ಣುಮುಚ್ಚುವುದಕ್ಕೇ ಆಗಲಿಲ್ಲ. ಹಾಸುಗೆಯಲ್ಲಿ ಏನು ಸೇರಿಕೊಂಡಿತ್ತೋ ದೇವರೇ ಬಲ್ಲ! ಯಾವುದೋ ಗಟ್ಟಿಯಾದ ಪದಾರ್ಥದ ಮೇಲೆ ಮಲಗಿದ್ದಂತೆ ತೋರುತ್ತಿತ್ತು. ದೇಹವೆಲ್ಲಾ ಜಡ್ಡುಕಟ್ಟಿ ಕಪ್ಪಗಾಗಿ ಬಿಟ್ಟಿದೆ! ಏನು ಭಯಂಕರವಪ್ಪಾ ಆ ಹಾಸಿಗೆ!" ಎಂದಳು.

ನಲವತ್ತು ಸುಪ್ಪತ್ತಿಗೆಗಳ ಮೇಲೆ ಮಲಗಿದ್ದರೂ ಒಂದು ಬಟಾಣಿಯ ಕಾಳು ಅಷ್ಟು ಒತ್ತಿಕೊಂಡಿತು ಎಂದು ಹೇಳಿದ ಅವಳು ಹದಿನಾರಾಣೆ ರಾಜಕುಮಾರಿಯೇ ಆಗಿರಬೇಕೆಂದು ಅವರೆಲ್ಲರೂ ನಿರ್ಧರಿಸಿದರು. ರಾಜಕುಮಾರಿಯಾಗಿದ್ದ ಹೊರತು ಅಂತಹ ಸೂಕ್ಷ್ಮವಾದ ಶರೀರವೂ ಮೃದುವಾದ ಚರ್ಮವೂ ಇರಲಾರದು ಎಂದು ನಿರ್ಣಯಿಸಿದರು.

ರಾಜಕುಮಾರ ಅವಳನ್ನು ತನ್ನ ಹೆಂಡತಿಯಾಗಿ ಪರಿಗ್ರಹಿಸಿದ. ಹದಿನಾರಾಣೆ ರಾಜಕುಮಾರಿ ದೊರೆತಳೆಂದು ಅವನಿಗೆ ಬಹಳ ಆನಂದವಾಯಿತು.

# ಹಾರುವ ಪೆಟ್ಟಿಗೆ

ಒಂದಾನೊಂದು ಕಾಲದಲ್ಲಿ ಒಬ್ಬ ವ್ಯಾಪಾರಿಯಿದ್ದ. ಅವನು ಬಹಳ ದೊಡ್ಡ ಸಾಹುಕಾರ. ಅವನಲ್ಲಿದ್ದ ನಾಣ್ಯಗಳನ್ನೆಲ್ಲಾ ನೆಲದ ಮೇಲೆ ಹರಡಿದ್ದರೆ ಒಂದು ಅಗಲವಾದ ದೊಡ್ಡ ರಾಜಬೀದಿಯನ್ನೇ ಮುಚ್ಚಿಬಿಡಬಹುದಾಗಿತ್ತು. ಅವನಲ್ಲಿ ಅಷ್ಟೊಂದು ಹಣವಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ. ತನ್ನ ಹಣವನ್ನು ಬಹಳ ಕಷ್ಟದಿಂದ ಸಂಪಾದಿಸಿದ್ದ. ಅದರ ಬೆಲೆ ಅವನಿಗೆ ತಿಳಿದಿತ್ತು. ಆದ್ದರಿಂದ ಅವನು ತನ್ನ ಐಶ್ವರ್ಯದಲ್ಲಿ ಸ್ವಲ್ಪವನ್ನೂ ದುಂದುಮಾಡದೆ ಎಲ್ಲವನ್ನೂ ಕಾಪಾಡಿಕೊಂಡಿದ್ದ. ಹೀಗೆ ಜೀವಿಸಿದ್ದು, ಕೊನೆಗೆ ಒಂದು ದಿನ ಅವನು ಸತ್ತುಹೋದ.

ತಂದೆಯ ಮರಣದ ಅನಂತರ ಅವನ ಹಣವೆಲ್ಲಾ ಅವನ ಮಗನ ಪಾಲಿಗೆ ಬಂತು. ಮಗ ಬಹಳ ಸುಖ ಪ್ರೇಮಿ. ಕೆಲಸಕ್ಕೆ ಬಾರದ ಗೆಳೆಯರ ಸಹವಾಸಕ್ಕೆ ಬಿದ್ದ. ತಂದೆ ತನಗೆ ಬಿಟ್ಟುಹೋಗಿದ್ದ ಆಸ್ತಿಯನ್ನೆಲ್ಲಾ ಬಹಳ ಸ್ವಲ್ಪ ಕಾಲದಲ್ಲೇ ಹಾಳುಮಾಡಿದ. ಕಾಸಿಗೆ ಗತಿಯಿಲ್ಲದ ಹಾಗಾದ. ಒಂದು ಜೊತೆ ಜೋಡು, ಒಂದು ಹಳೆಯ ಅಂಗಿ ಬಿಟ್ಟರೆ ಅವನಿಗೆ ಬೇರೆ ಬಟ್ಟೆಯೇ ಇಲ್ಲದ ಹಾಗಾಯಿತು. ಅವನು ಬಡವನಾದ ಒಡನೆ ಸ್ನೇಹಿತರೆಲ್ಲಾ ಅವನನ್ನು ತೊರೆದರು. ಅವನ ಜೊತೆಗೆ ಬೀದಿಯಲ್ಲಿ ನಡೆಯುವುದು ಕೂಡ ಅವರಿಗೆ ಅಪಮಾನಕರವಾಗಿ ಕಂಡುಬಂತು. ಆದರೆ ಅವರಲ್ಲಿ ಒಬ್ಬ ಸ್ವಲ್ಪ ದಯಾಳು. ಅವನು ಸ್ನೇಹಿತನ ಮೇಲೆ ಕರುಣೆಯಿಟ್ಟು ಅವನಿಗೆ ಒಂದು ಹಳೆಯ ಪೆಟ್ಟಿಗೆಯನ್ನು ಕಳುಹಿಸಿ, "ನಿನ್ನ ಸಾಮಾನುಗಳನ್ನೆಲ್ಲಾ ಕಟ್ಟಿಕೊಂಡು ಹೊರಡು" ಎಂದು ಹೇಳಿದ. ಆದರೆ ವ್ಯಾಪಾರಿಯ ಮಗನ ಬಳಿ ಆ ಪೆಟ್ಟಿಗೆಯಲ್ಲಿ ಇಡಲು ಯಾವ ಸಾಮಾನೂ ಇರಲಿಲ್ಲ. ಆದಕಾರಣ ಸಾಮಾನಿಗೆ ಬದಲಾಗಿ ಅವನೇ ಪೆಟ್ಟಿಗೆಯಲ್ಲಿ ಕುಳಿತುಕೊಂಡುಬಿಟ್ಟ.

ಅದೊಂದು ವಿಚಿತ್ರವಾದ ಪೆಟ್ಟಿಗೆ. ಬೀಗವನ್ನು ಅದುಮಿದೊಡನೆ ಪೆಟ್ಟಿಗೆ ಮೇಲಕ್ಕೇರಿ ಝುಯ್ಯನೆ ಮನೆಯ ಗವಾಕ್ಷದಲ್ಲಿ ತೂರಿ ಮೋಡಗಳ ಮೇಲೆ ದೂರ ದೂರ ಹಾರಿಹೋಯಿತು. ಅದರ ತಳಭಾಗ ಭಯಂಕರವಾಗಿ

ಚಟಪಟ ಎಂದು ಶಬ್ದ ಮಾಡುತ್ತಿತ್ತು. ಅದು ಎಲ್ಲಿ ಚೂರುಚೂರಾಗಿ ಬಿಡುವುದೋ ಎಂದು ಅವನಿಗೆ ಬಹಳ ಹೆದರಿಕೆಯಾಯಿತು. ಪೆಟ್ಟಿಗೆ ಬಿಚ್ಚಿಕೊಂಡಿದ್ದರೆ ಅವನ ಮೈಯೊಳಗಿನ ಎಲುಬೆಲ್ಲಾ ಪುಡಿಪುಡಿಯಾಗುತ್ತಿತ್ತು. ಅಬ್ಬಾ! ಊಹಿಸಿಕೊಂಡರೇ ದಿಗಿಲಾಗುತ್ತದೆ! ಕಟ್ಟಕಡೆಗೆ ಅವನು ಟರ್ಕಿ ದೇಶಕ್ಕೆ ಬಂದ. ಅಲ್ಲಿ ಒಂದು ಕಾಡಿನಲ್ಲಿ ಇಳಿದು, ಪೆಟ್ಟಿಗೆಯನ್ನು ಒಣಗಿದ ಎಲೆಗಳ ಕೆಳಗೆ ಮುಚ್ಚಿಟ್ಟು, ಪಟ್ಟಣದೊಳಕ್ಕೆ ಹೋದ. ಅವನು ಪರದೇಶ ದವನೆಂದು ಅವನನ್ನು ಯಾರೂ ಗುರುತಿಸಲಿಲ್ಲ. ಏಕೆಂದರೆ ಅವನಂತೆಯೇ ಆ ದೇಶದ ಜನರೆಲ್ಲರೂ ಜೋಡುಗಳನ್ನೂ ನಿಲುವಂಗಿಯನ್ನೂ ತೊಟ್ಟಿದ್ದರು. ದಾರಿಯಲ್ಲಿ ಅವನು ಮಗುವಿನೊಡನೆ ಹೋಗುತ್ತಿದ್ದ ಒಬ್ಬ ದಾದಿಯನ್ನು ಕಂಡ "ಅಮ್ಮಾ, ಅಲ್ಲಿ ಕಾಣುತ್ತಿರುವ ದೊಡ್ಡ ಅರಮನೆ ಯಾವುದು? ಅದರ ಕಿಟಕಿಗಳೆಲ್ಲಾ ಏಕೆ ಅಷ್ಟು ಎತ್ತರದಲ್ಲಿವೆ?" ಎಂದು ಅವಳನ್ನು ಕೇಳಿದ.

ಅವಳು "ಅದು ರಾಜನ ಮಗಳು ವಾಸಮಾಡುವ ಸ್ಥಳ. ಅವಳನ್ನು ಒಲಿಸಿಕೊಂಡು ಮದುವೆಯಾಗುವವರು ಅವಳಿಗೆ ಅಸೌಖ್ಯವನ್ನುಂಟು ಮಾಡುವರೆಂದು ಜೋಯಿಸರು ಭವಿಷ್ಯ ನುಡಿದಿದ್ದಾರೆ. ಆದ್ದರಿಂದ ರಾಜನೂ ರಾಣಿಯೂ ಎದುರಿಗೆ ಇದ್ದ ಹೊರತೂ ಅವಳ ಹತ್ತಿರ ಹೋಗಲು ಯಾರಿಗೂ ಅವಕಾಶವೇ ಇಲ್ಲ" ಎಂದಳು.

ವ್ಯಾಪಾರಿಯ ಮಗ ಅವಳನ್ನು ವಂದಿಸಿ ಕಾಡಿಗೆ ಹಿಂದಿರುಗಿ ಹೋದ. ತನ್ನ ಪೆಟ್ಟಿಗೆಯನ್ನು ಹೊರಕ್ಕೆ ತೆಗೆದು ಅದರೊಳಗೆ ಕುಳಿತುಕೊಂಡು ಅರಮನೆಯ ಮಾಳಿಗೆಯ ಮೇಲಕ್ಕೆ ಹಾರಿದ. ಅಲ್ಲಿಂದ ಅವನು ಮೆಲ್ಲನೆ ರಾಜಕುಮಾರಿಯ ಕೊಠಡಿಯ ಕಿಟಕಿಯ ಮೂಲಕ ಒಳಕ್ಕೆ ಹೋದ.

ರಾಜಕುಮಾರಿ ಒಂದು ಮೆತ್ತನೆಯ ರತ್ನಗಂಬಳಿಯ ಮೇಲೆ ಗಾಢ ನಿದ್ದೆಯಲ್ಲಿ ಮಲಗಿದ್ದಳು. ಅವಳ ಅಸಾಧಾರಣವಾದ ಚೆಲುವನ್ನು ಕಂಡು, ಅವನು ಅವಳನ್ನು ಮುತ್ತಿಟ್ಟ. ಅವಳಿಗೆ ಎಚ್ಚರಿಕೆಯಾಯಿತು. ಅವನನ್ನು ನೋಡಿ ಬಹಳ ಭಯವಾಯಿತು. ಆದರೆ ಅವನು "ನಾನೊಬ್ಬ ದೇವದೂತ. ನಿನ್ನನ್ನು ನೋಡುವುದಕ್ಕಾಗಿಯೇ ಆಕಾಶದಿಂದ ಕೆಳಗಿಳಿದು ಬಂದಿರುವೆ" ಎಂದು ಹೇಳಿದ. ಇದನ್ನು ಕೇಳಿ ಅವಳಿಗೆ ಬಹಳ ಸಮಾಧಾನವಾಯಿತು.

ಅವರು ಒಬ್ಬರ ಮಗ್ಗುಲಲ್ಲೊಬ್ಬರು ಕುಳಿತುಕೊಂಡರು ಅವಳ ಕಣ್ಣುಗಳನ್ನು ಕುರಿತು ಅವನು ಅನೇಕ ಕಥೆಗಳನ್ನು ಹೇಳಿದ. "ಅವು ಅತಿ ಸುಂದರವಾದ ಆಳವಾದ ಅಂಧಕಾರಮಯವಾದ ಸರೋವರಗಳಂತೆ ಇವೆ" ಎಂದ. "ಆ ಸರೋವರಗಳಲ್ಲಿ ನಿನ್ನ ಆಲೋಚನೆಗಳು ಜಲಕನ್ನಿಕೆಯ ರಂತೆ ತೇಲುತ್ತಿವೆ" ಎಂದ. ಅನಂತರ ಅವಳ ಹಣೆಯನ್ನು ವರ್ಣಿಸಿ "ಅದು ಚಿತ್ರಮಾಲೆಗಳಿಂದ ಅಲಂಕೃತವಾದ ಮಂಜಿನ ಬೆಟ್ಟಗಳಂತೆ ಇದೆ" ಎಂದ. ಅವನು ಅವಳಿಗೆ ಹೇಳಿದ ಸೊಗಸಾದ ಕಥೆಗಳಿಗೆ ಕೊನೆಯೇ ಇರಲಿಲ್ಲ. ಹೀಗೆ ಕಥೆಗಳನ್ನು ಹೇಳಿದನಂತರ "ನನ್ನನ್ನು ಮದುವೆಯಾಗು ವೆಯಾ?" ಎಂದು ಅವಳನ್ನು ಕೇಳಿದ, ಕೂಡಲೆ ಅವಳು "ಆಗುತ್ತೇನೆ" ಎಂದು ಒಪ್ಪಿಕೊಂಡಳು. "ನೀನು ಇಲ್ಲಿಗೆ ಶನಿವಾರ ಬರಬೇಕು. ಆಗ ರಾಜನೂ ರಾಣಿಯೂ ನನ್ನೊಡನೆ ಫಲಾಹಾರ ಮಾಡಲು ಬರುತ್ತಾರೆ. ನಾನು ಒಬ್ಬ ದೇವದೂತನನ್ನು ಮದುವೆಯಾಗುವೆನೆಂದು ಅವರು ಕೇಳಿದರೆ ಬಹಳ ಹೆಮ್ಮೆಪಡುತ್ತಾರೆ. ಆದರೆ ನೀನು ಅವರಿಗೆ ಹೇಳುವುದಕ್ಕಾಗಿ ಅತ್ಯುತ್ಕೃಷ್ಟವಾದ ಒಂದು ಕಥೆಯನ್ನು ಸಿದ್ಧಪಡಿಸಿಟ್ಟುಕೊಂಡಿರಬೇಕು. ಏಕೆಂದರೆ ನನ್ನ ತಂದೆತಾಯಿಗಳಿಗೆ ಕಥೆ ಎಂದರೆ ಪಂಚಪ್ರಾಣ. ಚೆನ್ನಾಗಿರುವ ವೀರರ ಕಥೆಗಳನ್ನು ಕೇಳಲು ನನ್ನ ತಾಯಿಗೆ ಬಹಳ ಇಷ್ಟ. ಹಾಸ್ಯಭರಿತವಾದ ಕಥೆಗಳ ಮೇಲೆ ನನ್ನ ತಂದೆಗೆ ಪ್ರೀತಿ ಹೆಚ್ಚು ಅವುಗಳನ್ನು ಕೇಳಿ ಕೇಳಿ ನಗ ಬೇಕೆಂದು ಆತ ಆಸೆಪಡುತ್ತಾನೆ" ಎಂದು ಹೇಳಿದಳು.

ಅವನು "ಓಹೋ, ಅಗತ್ಯವಾಗಿ ಆಗಬಹುದು. ನನ್ನ ಮದುವೆಯ ಕಾಲದಲ್ಲಿ ಒಂದು ಕತೆಯನ್ನೇ ಅವರಿಗೆ ಉಡುಗೊರೆಯಾಗಿ ಕೊಡುತ್ತೇನೆ!" ಎಂದ. ಬಳಿಕ ಅವರು ಒಬ್ಬರನ್ನೊಬ್ಬರು ಬೀಳ್ಕೊಂಡರು. ರಾಜಕುಮಾರಿ ಅವನಿಗೆ ಬಂಗಾರದ ಕೆತ್ತನೆಯ ಕೆಲಸ ಮಾಡಿದ್ದ ಒಂದು ಕತ್ತಿಯನ್ನು ಕೊಟ್ಟಳು. ಅಂತಹುದೊಂದು ಪದಾರ್ಥ ಅವನಿಗೂ ಬಹಳವಾಗಿ ಬೇಕಾಗಿತ್ತು.

ಅವನು ಹಾರಿ ಹೋಗಿ, ಒಂದು ಹೊಸ ನಿಲುವಂಗಿಯನ್ನು ಕೊಂಡು ತಂದು, ಕಾಡಿನಲ್ಲಿ ಕುಳಿತು, ಹೊಸದೊಂದು ಕತೆಯನ್ನು ಮನಸ್ಸಿನಲ್ಲೇ ಕಲ್ಪಿಸ ತೊಡಗಿದ. ಅದು ಶನಿವಾರದ ಹೊತ್ತಿಗೆ ತಯಾರಾಗಿರಬೇಕಾಗಿತ್ತು. ಕತೆಗಳನ್ನು ಕಟ್ಟುವುದು ಸುಲಭವಾದ ಕೆಲಸವಲ್ಲ.

ಅಂತೂ ಸಮಯಕ್ಕೆ ಸರಿಯಾಗಿ ಅವನು ಅದನ್ನು ಸಿದ್ಧವಾಗಿಟ್ಟು ಕೊಂಡಿದ್ದ. ಶನಿವಾರ ಬಂತು.

ರಾಜನೂ ರಾಣಿಯೂ ಆಸ್ಥಾನಿಕರೂ ಅವನಿಗಾಗಿ ರಾಜಕುಮಾರಿಯ ಕೋಣೆಯಲ್ಲಿ ಕಾದಿದ್ದರು. ಅವನು ಬಂದೊಡನೆ ಅವನನ್ನು ಸಂತೋಷದಿಂದ ಸ್ವಾಗತಿಸಿದರು.

ರಾಣಿ "ಈಗ ನೀನು ನಮಗೆ ಆಲೋಚನಾಜನಕವೂ ಬೋಧಪ್ರದವೂ ಆದ ಒಂದು ಒಳ್ಳೆಯ ಕತೆಯನ್ನು ಹೇಳಬೇಕು" ಎಂದಳು.

ರಾಜ "ಅದನ್ನು ಕೇಳಿ ನಾವು ನಗುವ ಹಾಗೂ ಇರಬೇಕು, ಅದು" ಎಂದ.

ಅವನು "ಹಾಗೆಯೇ ಆಗಲಿ" ಎಂದು ಕತೆ ಹೇಳಲು ಆರಂಭಿಸಿದ.

## ವ್ಯಾಪಾರಿಯ ಮಗ ಹೇಳಿದ ಕಥೆ

"ಒಂದಾನೊಂದು ಕಾಲದಲ್ಲಿ ಒಂದು ಕಟ್ಟು ಬೆಂಕಿಯ ಕಡ್ಡಿಗಳಿದ್ದವು. ಅವು ತಮ್ಮ ಘನವಾದ ವಂಶಾವಳಿಯನ್ನು ನೆನೆದು ಬಹಳ ಜಂಭ ಪಡುತ್ತಿದ್ದವು. ಅವುಗಳನ್ನು ಮಾಡಿದ್ದ ಮರ ಅರಣ್ಯದಲ್ಲೆಲ್ಲಾ ಅತ್ಯಂತ ದೊಡ್ಡದಾಗಿತ್ತು. ದೀಪದ ಕಡ್ಡಿಗಳು ಒಂದು ಮನೆಯಲ್ಲಿ ಗೋಡೆಗೆ ಅಂಟಿಕೊಂಡಿದ್ದ ಅಟ್ಟಣಿಗೆಯ ಮೇಲಿದ್ದವು. ಅವುಗಳ ಪಕ್ಕದಲ್ಲಿ ಎಡಕ್ಕೆ ಒಂದು ಚಕಮುಕಿ ಡಬ್ಬಿಯೂ ಬಲಕ್ಕೆ ಒಂದು ಹಳೆಯ ಕಂಚಿನ ಕೊಳದಪ್ಪಲೆಯೂ ಇದ್ದವು. ದೀಪದ ಕಡ್ಡಿಗಳು ಇವೆರಡಕ್ಕೂ ತಮ್ಮ ಕತೆಯನ್ನೆಲ್ಲಾ ಹೇಳಿದವು.

'ನಾವು ಸಜೀವವಾದ ಮರವಾಗಿದ್ದಾಗ ನಾವೆಲ್ಲಾ ಹಸುರು ರೆಂಬೆಯಾಗಿದ್ದೆವು. ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆ ನಮಗೆ ವಜ್ರದಂತೆ ಥಳಥಳಿಸುವ ಪಾನೀಯ ದೊರೆಯುತ್ತಿತ್ತು. ಅದೇ ಮಂಜಿನ ಹನಿ. ಹಗಲು ಹೊತ್ತಿನಲ್ಲಿ ಸೂರ್ಯನ ಬೆಳಕೂ, ಕತೆ ಹೇಳಲು ನೂರಾರು ಹಕ್ಕಿಗಳೂ ನಮಗಿದ್ದವು. ನಾವು ಬಹಳ ಶ್ರೀಮಂತರಾಗಿದ್ದೆವು. ಇತರ ಮರಗಿಡಗಳು ಬೇಸಗೆಯಲ್ಲಿ ಮಾತ್ರ ಹಸುರು ವಸ್ತ್ರಗಳನ್ನು ಧರಿಸುತ್ತಿದ್ದರೆ, ನಾವು ಬೇಸಗೆಯಲ್ಲೂ ಚಳಿಗಾಲದಲ್ಲೂ ಅಂತಹ ಸುಂದರವಾದ ಉಡುಪನ್ನೇ ಹೊಂದಿರಬಹುದಾಗಿತ್ತು.

ಆದರೇನು? ಮರ ಕಡಿಯುವವರು ಬಂದರು. ಒಂದು ದೊಡ್ಡ ಕ್ರಾಂತಿಯಾಯಿತು. ನಮ್ಮ ಕುಟುಂಬವೇ ಒಡೆದು ಛಿದ್ರವಾಯಿತು. ನಮ್ಮ ಗುಂಪಿನ ನಾಯಕ ಒಂದು ಹಡಗಿನ ಧ್ವಜಸ್ತಂಭವಾದ. ಇತರ ಕೊಂಬೆಗಳನ್ನು ಬೇರೆ ಬೇರೆ ವಿಧಗಳಲ್ಲಿ ಎಲ್ಲಿಗೋ ಸಾಗಿಸಿದರು. ನಾವು ಈ ಸ್ಥಿತಿಯಲ್ಲಿದ್ದೇವೆ. ಜಗತ್ತಿನ ಸಾಮಾನ್ಯ ಜನರಿಗೆ ಬೆಳಕನ್ನು ಕೊಡುವುದು ನಮ್ಮ ಕೆಲಸ. ಆದ್ದರಿಂದಲೇ ನಮ್ಮಂತಹ ಐಶ್ವರ್ಯವಂತರೂ ಈ ಅಡುಗೆಯ ಮನೆಗೆ ಬಂದಿರುವುದು.'

"ಕಡ್ಡಿಗಳ ಮಗ್ಗುಲಲ್ಲಿ ಕುಚಿನ ಕೊಳದಪ್ಪಲೆಯಿತ್ತು. 'ಅದು ನನ್ನ ಬಾಳು ಬೇರೆಯ ರೀತಿಯದು. ನಾನು ಪ್ರಪಂಚಕ್ಕೆ ಕಾಲಿಟ್ಟಾಗಿನಿಂದಲೂ ನನ್ನ ಜೀವನವೆಲ್ಲವೂ ಜನರಿಂದ ತಿಕ್ಕಿಸಿಕೊಳ್ಳುವುದರಲ್ಲೂ ಬೆಂಕಿಯ ಉರಿಯ ಮೇಲೆ ಬೇಯುವುದರಲ್ಲೂ ಕಳೆದು ಹೋಗಿದೆ. ಗಟ್ಟಿಯಾದ ವಸ್ತುಗಳೆಲ್ಲಾ ನನ್ನ ಹತ್ತಿರಕ್ಕೇ ಬರುತ್ತವೆ. ನನ್ನ ಸಾನ್ನಿಧ್ಯದಲ್ಲಿ ಸ್ವಲ್ಪಹೊತ್ತು ಇದ್ದು ಮೆತ್ತಗಾಗಿ ಹೋಗುತ್ತವೆ. ಮನೆಯಲ್ಲಿ ನಾನು ಅತಿಮುಖ್ಯನಾದವನು, ಎಲ್ಲರ ಊಟವೂ ಆದ ಮೇಲೆ ಚೊಕ್ಕಟವಾಗಿ ಮೈ ತೊಳೆದು, ಹೊಳೆಯುತ್ತಾ ಹಲಗೆಯ ಮೇಲೆ ಕುಳಿತು, ನನ್ನ ಸ್ನೇಹಿತರೊಡನೆ ಹರಟುವುದೇ ನನಗೆ ಸಂತೋಷ. ಆದರೆ ನೀರಿನ ಕೊಡ ಮಾತ್ರ ಮನೆಯ ಹೊರಗೆ ಹೋಗಿ ಬರುತ್ತದೆ. ನಾವೆಲ್ಲರೂ ಯಾವಾಗಲೂ ಒಳಗೇ ಇರುತ್ತೇವೆ. ಬಿಂದಿಗೆ ಆಗಾಗ ಅಂಗಳಕ್ಕೆ ಹೋಗಿ ಬರುತ್ತದೆ. ನಮಗೆಲ್ಲ ಹೊರಗಿನ ಸಮಾಚಾರಗಳನ್ನು ತಿಳಿಸುವುದು ತರ್ಕಾರಿಯ ಕೈಬುಟ್ಟಿ. ಅದು ಸರ್ಕಾರ, ಪ್ರಜೆಗಳು ಮೊದಲಾದ ವಿಷಯಗಳನ್ನು ಕುರಿತು ಬೇಕಾದಹಾಗೆ ಮಾತಾಡುತ್ತದೆ. ಮೊನ್ನೆಯ ದಿನ ಒಂದು ಹಳೆಯ ಮಡಕೆ ಅದರ ಮಾತನ್ನು ಕೇಳಿ ಗಾಬರಿಯಿಂದ ಕೆಳಕ್ಕೆ ಬಿದ್ದು ಒಡೆದೇ ಹೋಯಿತು. ಕೈಬುಟ್ಟಿ ಪ್ರಜಾಪಕ್ಷಕ್ಕೆ ಸೇರಿದುದು.

"ಚಕಮುಕಿ ಡಬ್ಬಿ 'ನೀನು ತಲೆಯೆಲ್ಲಾ ಹರಟುತ್ತೀ' ಸುಮ್ಮನೆ ತಮಾಷೆಯಾಗಿ ಮಾತಾಡಬಾರದೆ? ಎಂದು ಗರ್ಜಿಸಿತು ಅದು ಮಾತಾಡಿದ ಜೋರಿಗೆ ಅದರ ಒಳಗಿದ್ದ ಚಕಮುಕಿ ಕಲ್ಲು ಒಂದಕ್ಕೊಂದು ತಾಕಿ ಕಿಡಿ ಹುಟ್ಟಿತು.

"ದೀಪದ ಕಡ್ಡಿಗಳು 'ಆಗಲಿ ಹಾಗಾದರೆ ನಮ್ಮಲ್ಲಿ ಯಾರು ಅತ್ಯಂತ ದೊಡ್ಡ ವಂಶಕ್ಕೆ ಸೇರಿದವರೋ ಗೊತ್ತು ಮಾಡೋಣ' ಎಂದವು.

"ಮಣ್ಣಿನ ಮಡಕೆ 'ಕೂಡದು. ನನ್ನ ವಿಷಯವಾಗಿಯೇ ಗರ್ವದಿಂದ ಹೇಳಿಕೊಳ್ಳುವುದು ನನಗೆ ಸರಿಬೀಳುವುದಿಲ್ಲ. ಅದರ ಬದಲು ಸಾಯಂಕಾಲ ವನ್ನು ವಿನೋದದಿಂದ ಕಳೆಯಲು ಏನಾದರೂ ಕತೆಗಳನ್ನು ಹೇಳೋಣ. ನಾನೇ ಮೊದಲು ಮಾಡುತ್ತೇನೆ. ನಾವೆಲ್ಲರೂ ಅನುಭವಿಸಿರುವ ವಿಷಯ ವನ್ನೇ ನಿಮಗೆ ಹೇಳುತ್ತೇನೆ. ಅವು ತಿಳಿದುಕೊಳ್ಳುವುದಕ್ಕೆ ಸುಲಭವಾಗಿರು ತ್ತವೆ.' ಎಂದು ಕತೆ ಹೇಳಲು ಆರಂಭಿಸಿತು. 'ಪೂರ್ವ ಸಮುದ್ರದ ತೀರದಲ್ಲಿ' ಎಂದು ಅದರ ಕತೆ ಮೊದಲಾಯಿತು.

ತಟ್ಟೆಗಳೆಲ್ಲಾ 'ಕತೆಯ ಆರಂಭ ಬಹಳ ಚೆನ್ನಾಗಿದೆ. ಕತೆಯೂ ಚೆನ್ನಾಗಿರಬೇಕು' ಎಂದವು.

ಮಡಕೆ ಮುಂದುವರಿಯಿತು. 'ನಾನು ನನ್ನ ಬಾಲ್ಯವನ್ನೂ ತಾರುಣ್ಯ ವನ್ನೂ ಅಲ್ಲಿ ಕಳೆದೆ. ನಮ್ಮ ಮನೆ ಬಹಳ ಶಾಂತಮಯವಾಗಿತ್ತು. ಒಂದೆರಡು ಕಾಲ್ಮಣೆಗಳೂ ಮಂಚಗಳೂ ಇದ್ದವು. ನೆಲ ಚೊಕ್ಕಟವಾಗಿರುತ್ತಿತ್ತು. ಬಾಗಿಲುಗಳಿಗೂ ಕಿಟಕಿಗಳಿಗೂ ಯಾವಾಗಲೂ ಶುಭ್ರವಾದ ಪರದೆಗಳನ್ನು ಹಾಕಿರುತ್ತಿದ್ದರು.'

"ಅಷ್ಟರಲ್ಲಿ ಪೊರಕೆ 'ಆಹಾ! ಎಂಥಾ ಒಳ್ಳೆಯ ಕತೆಗಾರನಯ್ಯ ನೀನು! ಕತೆ ಕೇಳಿದವರು ಯಾರಾದರೂ ಕತೆ ಹೇಳುತ್ತಿರುವವರು ಹೆಂಗಸರೇ ಎಂದು ಬಿಡುವರು!' ಎಂದಿತು.

"ನೀರಿನ ಕೊಡ 'ಹೌದು, ನನಗೂ ಹಾಗೆಯೇ ತೋರುತ್ತದೆ!' ಎಂದು ಸಂತೋಷದಿಂದ ಒಂದು ಸಾರಿ ನೆಗೆದು 'ಠಣ್' ಎಂದು ನೆಲಕ್ಕೆ ಬಿತ್ತು.

"ಮಡಕೆ ತನ್ನ ಕತೆಯನ್ನು ಮುಂದೆ ಹೇಳಿತು. ಅದರ ಕೊನೆ ಹೆಚ್ಚು ಕಡಿಮೆ ಮೊದಲಿನಂತೆಯೇ ಇತ್ತು."

"ತಟ್ಟೆಗಳೆಲ್ಲಾ ಸಂತೋಷದಿಂದ 'ಟಪಟಪ' ಶಬ್ದ ಮಾಡಿದವು. ಪೊರಕೆ ಮಡಕೆಗೆ ಮೆದೆಯ ಹುಲ್ಲಿನ ಹಾರ ಹಾಕಿತು. ಇತರರಿಗೆ ಕೋಪ ಬರಲೆಂಬುದೇ ಅದರ ಉದ್ದೇಶ. 'ನಾನು ಈ ದಿನ ಅದಕ್ಕೆ ಹಾರ ಹಾಕಿದರೆ ಅದು ನಾಳೆ ನನಗೆ ಹಾರ ಹಾಕುತ್ತದೆ' ಎಂದು ಅದು ಯೋಚಿಸಿತು."

"ಅಲ್ಲಿದ್ದ ಇಕ್ಕಳ 'ನಾನು ಈಗ ಕುಣಿಯುತ್ತೇನೆ' ಎಂದು ಕುಣಿಯು ಲಾರಂಭಿಸಿತು. ಅಬ್ಬಾ! ಅದು ಎಷ್ಟು ಮೇಲಕ್ಕೆ ಹಾರುತ್ತಿತ್ತು! ಅದರ

ಕಾಲು ಎಷ್ಟು ಉದ್ದವಾಗಿದ್ದವು! ಅದನ್ನು ನೋಡಿ ಮೂಲೆಯಲ್ಲಿದ್ದ ಒಂದು ಒರಗುದಿಂಬು ಹೊಟ್ಟೆ ಬಿರಿಯುವವರೆಗೂ ನಕ್ಕು ಫಟ್ಟನೆ ಒಡೆದೇ ಹೋಯಿತು. ಇಕ್ಕಳ 'ನನಗೂ ಒಂದು ಹಾರ ಹಾಕುವುದಿಲ್ಲವೆ?' ಎಂದಿತು. ಅವು ಅದಕ್ಕೂ ಒಂದು ಹಾರ ಹಾಕಿದವು.

"ದೀಪದಕಡ್ಡಿಗಳು 'ಇವೆಲ್ಲಾ ಕೆಲಸಕ್ಕೆ ಬಾರದ ಕುರಿಯ ಹಿಂಡು' ಎಂದವು.

"ಈಗ ನೀರುಕಾಯಿಸುವ ಪಾತ್ರೆ ಹಾಡಬೇಕೆಂದು ಎಲ್ಲವೂ ಕೇಳಿದವು. ಆದರೆ ಅದಕ್ಕೆ ಶೀತವಾಗಿತ್ತು. ಬೆಂಕಿಯಮೇಲೆ ಕುದಿಯುತ್ತಿದ್ದಾಗ ವಿನಾ ಇತರ ಸಮಯಗಳಲ್ಲಿ ಅದಕ್ಕೆ ಹಾಡುವುದಕ್ಕೆ ಆಗುತ್ತಿರಲಿಲ್ಲ.

"ಕಿಟಕಿಯಲ್ಲಿ ಒಂದು ಹಳೆಯ ಲೇಖನಿ ಇತ್ತು. ಮನೆಯ ಪರಿಚಾರಕ ಅದನ್ನು ಬರೆಯಲು ಉಪಯೋಗಿಸುತ್ತಿದ್ದ. ಅದರ ವಿಷಯದಲ್ಲಿ ಅಸಾಧಾರಣ ವಾದುದು ಏನೂ ಇರಲಿಲ್ಲ. ಆದರೆ ಅದನ್ನು ಮಸಿಕುಡಿಕೆಯಲ್ಲಿ ಬಹಳ ಆಳದವರೆಗೂ ಅದ್ದಿಬಿಟ್ಟಿದ್ದರು. ಆದರಿಂದ ಅದು ಹೆಮ್ಮೆಪಡುತ್ತಿತ್ತೇ ಹೊರತು ಅದಕ್ಕೆ ಸ್ವಲ್ಪವಾದರೂ ವ್ಯಸನವಿರಲಿಲ್ಲ. ಅದು 'ನೀರಿನ ಪಾತ್ರೆ ಹಾಡದಿದ್ದರೆ ಹೋಗಲಿ. ಹೊರಗಡೆ ಪಂಜರದಲ್ಲಿ ಒಂದು ಗಿಳಿಯಿದೆ. ಅದು ಹಾಡಬಲ್ಲದು. ಹಾಡುವುದರಲ್ಲಿ ಅದಕ್ಕೆ ಅಂತಹ ಪಾಂಡಿತ್ಯವೇನೂ ಇಲ್ಲ. ಆದರೂ ಈ ಒಂದು ದಿನದ ಮಟ್ಟಿಗೆ ಚಿಂತೆಯಿಲ್ಲ' ಎಂದಿತು.

"ಅಲ್ಲಿಯೇ ಒಂದು ತಂಬಿಗೆಯಿತ್ತು. ಅದಕ್ಕೂ ನೀರುಕಾಯಿಸುವ ಪಾತ್ರೆಗೂ ಹತ್ತಿರದ ಸಂಬಂಧ. ಗಿಳಿ ಹಾಡಬೇಕೆಂಬ ಸಲಹೆಗೆ ಅದು ಒಪ್ಪಲಿಲ್ಲ. ಅದು ಹಾಡಿದರೆ ತನ್ನ ಜಾತಿಗೇ ಅವಮಾನವೆಂದು ಹೇಳಿಬಿಟ್ಟಿತು. ಮತ್ತು ಆ ವಿಚಾರದಲ್ಲಿ ತೀರ್ಮಾನ ಹೇಳಲು ತರ್ಕಾರಿ ಬುಟ್ಟಿಯನ್ನು ಕೇಳಿಕೊಂಡಿತು.

"ತರ್ಕಾರಿಯ ಬುಟ್ಟಿ 'ನನಗೆ ಬಹಳ ವ್ಯಸನವಾಗುತ್ತದೆ. ಸಾಯಂ ಕಾಲದ ಹೊತ್ತನ್ನು ಸಂತೋಷದಿಂದ ಕಳೆಯುವುದು ಹೀಗೇಯೇ? ಮನೆಯಲ್ಲಿ ಎಲ್ಲವನ್ನೂ ಸರಿಯಾಗಿಡುವುದೂ ಎಲ್ಲರೂ ಅವರವರ ಸ್ಥಾನದಲ್ಲಿರುವುದೂ ಒಳ್ಳೆಯದಲ್ಲವೇ?' ಎಂದಿತು.

"ಅವೆಲ್ಲಾ ಒಟ್ಟಿಗೆ 'ಹಾಗೆಯೇ ಆಗಲಿ. ಎಲ್ಲರೂ ಸಾಲಿಗೆ ನಿಂತು ಕೊಳ್ಳೋಣ. ಅನಂತರ ನಮ್ಮ ಯೋಗ್ಯತೆಯನ್ನು ಅನುಸರಿಸಿ ನಮ್ಮನಮ್ಮ ಸ್ಥಳಗಳಿಗೆ ಹೋಗಬಹುದು' ಎಂದವು.

"ಅಷ್ಟು ಹೊತ್ತಿಗೆ ಸರಿಯಾಗಿ ಬಾಗಿಲು ತೆರೆಯಿತು. ಪರಿಚಾರಕ ಬಂದ. ಅವುಗಳೆಲ್ಲಾ ಮಾತಾಡದೆ ಸುಮ್ಮನೆ ನಿಂತಿದ್ದವು. ಎಲ್ಲವೂ ತಮ್ಮಷ್ಟಕ್ಕೆ ತಾವೇ 'ವೃಥಾ ಜಗಳವಾಡದೆ ಮೊದಲೇ ತಮಾಷೆಯಾಗಿ ಕಾಲಕಳೆದಿದ್ದರೆ ಚೆನ್ನಾಗಿತ್ತು, ಅನ್ಯಾಯವಾಯಿತು' ಎಂದುಕೊಂಡವು.

"ಪರಿಚಾರಕ ಕಡ್ಡಿಗಳನ್ನು ಗೀಚಿ ದೀಪಹಚ್ಚಿದ. ಅಬ್ಬಾ! ಅವು ಹೇಗೆ ಚಟಚಟನೆ ಶಬ್ದಮಾಡಿ ಹೊತ್ತಿಕೊಂಡು ಉರಿದವು!

"ಅವು 'ನಾವೇ ಅತ್ಯಂತ ದೊಡ್ಡ ಅಂತಸ್ತಿನವರೆಂದು ಈಗಲಾದರೂ ಎಲ್ಲರಿಗೂ ತಿಳಿಯುತ್ತದೆ. ನಮಗೆ ಮೊದಲ ಮರ್ಯಾದೆ ದೊರೆತಿದೆ. ನಾವು ಎಷ್ಟು ಪ್ರಕಾಶದಿಂದ ಹೊಳೆಯುತ್ತಿದ್ದೇವೆ! ನಮ್ಮ ಸುತ್ತಲೂ ಎಂತಹ ಬೆಳಕನ್ನು ಬೀರುತ್ತಿದ್ದೇವೆ!' ಎಂದುಕೊಂಡವು. ಹೀಗೆ ಹೇಳಿಕೊಳ್ಳುತ್ತಿದ್ದಾಗಲೇ ಅವು ಸುಟ್ಟು ಬೂದಿಯಾದವು!"

ಇಲ್ಲಿಗೆ ವ್ಯಾಪಾರಿಯ ಮಗನ ಕತೆ ಮುಗಿಯಿತು. ರಾಣಿ "ಬಹಳ ಸೊಗಸಾದ ಕತೆ! ನಾನು ದೀಪದ ಕಡ್ಡಿಗಳೊಂದಿಗೆ ಅಡಿಗೆಯ ಮನೆಯಲ್ಲಿದ್ದಂತೆಯೇ ನನಗೆ ತೋರುತ್ತಿತ್ತು. ಖಂಡಿತವಾಗಿಯೂ ನೀನು ನಮ್ಮ ಮಗಳನ್ನು ಮದುವೆಯಾಗಬಹುದು" ಎಂದಳು.

ರಾಜ "ಅಗತ್ಯವಾಗಿ ಆಗಲಿ. ನೀನು ಅವಳನ್ನು ನಾಳೆ ಸೋಮವಾರದ ದಿನವೇ ಮದುವೆಯಾಗಬಹುದು" ಎಂದು ಹೇಳಿದ.

ಮದುವೆ ನಿಶ್ಚಯವಾಯಿತು. ಮದುವೆಗೆ ಗೊತ್ತಾಗಿದ್ದ ಲಗ್ನದ ಹಿಂದಿನ ದಿನ ಪಟ್ಟಣವನ್ನೆಲ್ಲಾ ಅಲಂಕರಿಸಿ ದೀಪಗಳಿಂದ ಸಿಂಗರಿಸಿದರು. ಊರಿಗೆಲ್ಲಾ ಸಕ್ಕರೆಯನ್ನೂ ಹಣ್ಣುಗಳನ್ನೂ ಹಂಚಿದರು. ಹುಡುಗರು ಸಂತೋಷದಿಂದ ನೆಗೆದು ಕುಣಿದಾಡಿ ಸಿಳ್ಳುಹಾಕಿ ಹಾಡತೊಡಗಿದರು. ಎಲ್ಲವೂ ಬಹಳ ಅಂದವಾಗಿತ್ತು.

ವ್ಯಾಪಾರಿಯ ಮಗ "ಈಗ ನಾನೊಂದು ತಮಾಷೆಮಾಡುತ್ತೇನೆ" ಎಂದುಕೊಂಡು ಪಟಾಕಿಗಳನ್ನೂ ಸುರುಸುರು ಬಾಣಗಳನ್ನೂ ಕೊಂಡು ತಂದು, ಅವನ್ನು ತನ್ನ ಪೆಟ್ಟಿಗೆಯಲ್ಲಿಟ್ಟುಕೊಂಡು, ಮೇಲಕ್ಕೆ ಹಾರಿ, ಆಕಾಶದಲ್ಲಿ ಅವುಗಳನ್ನು ಹತ್ತಿಸತೊಡಗಿದ.

ಊರಿನ ಜನರೆಲ್ಲರೂ ಅದನ್ನು ನೋಡಿ ಕುಣಿದರು. ಅವರ ಕಾಲಿನ ಜೋಡುಗಳೂ ಹಾರಾಡಿದವು. ಇಷ್ಟು ಎತ್ತರಕ್ಕೆ ಹಾರುತ್ತಿದ್ದ ಪಟಾಕಿಗಳನ್ನು ಅವರು ಹಿಂದೆ ಎಂದೂ ನೋಡಿಯೇ ಇರಲಿಲ್ಲ. ಆದ್ದರಿಂದ ಅವುಗಳನ್ನು ಧೂಮಕೇತುಗಳೆಂದೂ ಉಲ್ಕಾಪಾತಗಳೆಂದೂ ತಿಳಿದಿದ್ದರು. ಇಂತಹ ಅದ್ಭುತ ನೋಟಗಳನ್ನು ಕಾಣಬೇಕಾದರೆ ತಮ್ಮ ರಾಜಕುಮಾರಿಯನ್ನು ಮದುವೆಯಾಗುವವನು ದೇವದೂತನೇ ಆಗಿರಬೇಕೆಂದು ಯೋಚಿಸಿದರು.

ವ್ಯಾಪಾರಿಯ ಮಗ ಪಟಾಕಿಗಳನ್ನೆಲ್ಲಾ ಹತ್ತಿಸಿ ಉರಿಸಿದ್ದು ಆದಮೇಲೆ ತನ್ನ ಪೆಟ್ಟಿಗೆಯೊಂದಿಗೆ ಕಾಡಿಗೆ ಬಂದು ಇಳಿದ. ಒಡನೆಯೇ "ಈಗ ನಾನು ಪಟ್ಟಣದೊಳಗೆ ಹೋಗಿ ಜನ ನನ್ನ ಪಟಾಕಿಯ ಪ್ರದರ್ಶನವನ್ನು ಕುರಿತು ಏನು ಮಾತಾಡಿಕೊಳ್ಳುತ್ತಿದ್ದಾರೆಯೋ ಕೇಳಿಬರುತ್ತೇನೆ" ಎಂದು ಕೊಂಡು ಹೊರಟ.

ನಗರದಲ್ಲಿ ಪ್ರತಿಯೊಬ್ಬನೂ ಅತ್ಯಂತ ಉತ್ಸಾಹದಿಂದ ಮಾತಾಡುತ್ತಿದ್ದ. ಎಲ್ಲರೂ ಪಟಾಕಿಯ ಪ್ರದರ್ಶನವನ್ನು ಹೊಗಳುವವರೇ ಆಗಿದ್ದರು.

ಒಬ್ಬನು "ನಾನು ದೇವದೂತನನ್ನೇ ನೋಡಿದೆನು. ಆತನ ಕಣ್ಣು ಹೊಳೆಯುವ ನಕ್ಷತ್ರಗಳ ಹಾಗಿದ್ದವು. ಅವನ ಗಡ್ಡ ಬಿಳಿ ನೊರೆಯ ನೀರಿನ ಹಾಗಿತ್ತು" ಎಂದು ಹೇಳುತ್ತಿದ್ದ.

ಇನ್ನೊಬ್ಬ "ಅವನೊಂದು ಬೆಂಕಿಯ ಶಾಲನ್ನು ಹೊದ್ದುಕೊಂಡಿದ್ದ. ಅದರ ಮಡಿಕೆಗಳಿಂದ ಸುಂದರವಾದ ದೇವತೆಗಳ ತಲೆಗಳು ಇಣಿಕಿ ನೋಡುತ್ತಿದ್ದವು" ಎಂದ. ಹೀಗೆ ವ್ಯಾಪಾರಿಯ ಮಗ ಎಲ್ಲೆಲ್ಲಿ ಹೋದರೂ ಒಳ್ಳೆಯ ಸಂತೋಷಕರವಾದ ನುಡಿಗಳನ್ನೇ ಕೇಳುತ್ತಿದ್ದ. ಮಾರನೆಯ ದಿನವೇ ಅವನ ಮದುವೆಗೆ ಗೊತ್ತಾಗಿದ್ದ ದಿನವಾಗಿತ್ತು. ಅವನು ತನ್ನ ಪೆಟ್ಟಿಗೆಯಲ್ಲಿ ಕುಳಿತುಕೊಳ್ಳುವುದಕ್ಕಾಗಿ ಕಾಡಿಗೆ ಹಿಂದುರಿಗಿದ. ಆದರೆ ಅದು ಎಲ್ಲಿತ್ತು? ಪೆಟ್ಟಿಗೆ ಸುಟ್ಟುಹೋಗಿತ್ತು. ಅವನು ಆಕಾಶದಲ್ಲಿ ಹಾರಿಸಿದ್ದ ಪಟಾಕಿಯ ಒಂದು ಕಿಡಿ ಕಾಡಿನ ಹುಲ್ಲಿನ ಮೇಲೆ ಬಿದ್ದು ಅದು ಹತ್ತಿಕೊಂಡಿತ್ತು. ಆ ಹುಲ್ಲಿನೊಳಗೆ ಅವನು ಹುದುಗಿಸಿ ಇಟ್ಟಿದ್ದ ಪೆಟ್ಟಿಗೆ ಬೂದಿಯಾಗಿತ್ತು. ಈಗ ಅವನು ಹಾರಲು ಆಗಲಿಲ್ಲ. ಪುನಃ ರಾಜಕುಮಾರಿಯ ಬಳಿಗೆ ಹೋಗುವ ಹಾಗೆಯೇ ಇರಲಿಲ್ಲ. ನಡೆದು ಹೋಗಿದ್ದರೆ ಇವನನ್ನು ದೇವ

ದೂತನೆಂದು ಯಾರೂ ಕರೆದು ಗೌರವಿಸುತ್ತಿರಲಿಲ್ಲ. ಕೆನ್ನೆಗೆ ಏಟುಕೊಟ್ಟು ಓಡಿಸಿಬಿಡುತ್ತಿದ್ದರು.

ರಾಜಕುಮಾರಿ ಮಾತ್ರ ದಿನವೆಲ್ಲಾ ಅರಮನೆಯ ಮಾಳಿಗೆಯ ಮೇಲೆ ಆವಸಿಗಾಗಿ ಕಾದು ನಿಂತಿದ್ದಳು. ಅವಳು ಈಗಲೂ ಅಲ್ಲಿಯೇ ನಿಂತಿರಬಹುದು. ಅವನು ಕಥೆಗಳನ್ನು ಹೇಳಿಕೊಂಡು ಜಗತ್ತಿನಲ್ಲೆಲ್ಲಾ ಅಲೆಯುತ್ತಿದ್ದಾನೆ. ಆದರೆ ಅವನ ಈಗಿನ ಕಥೆಗಳು ಯಾವುವೂ ದೀಪದ ಕಡ್ಡಿಗಳ ವಿಚಾರವಾಗಿ ಅವನು ಹೇಳಿದ ಕಥೆಯಷ್ಟು ಹಾಸ್ಯಭರಿತವಾಗಿಲ್ಲ.

# ಕಾಡು ಹಂಸಗಳು

ಚಳಿಗಾಲ ಬಂದೊಡನೆ ಹಕ್ಕಿಗಳೆಲ್ಲಾ ಹಾರಿಹೋಗಿ ಬಹುದೂರದ ಪ್ರದೇಶವೊಂದರಲ್ಲಿ ವಾಸಿಸುತ್ತವೆ. ಅಲ್ಲಿ ಒಬ್ಬ ದೊರೆಯಿದ್ದ. ಅವನಿಗೆ ಹನ್ನೊಂದು ಜನ ಗಂಡುಮಕ್ಕಳು, ಒಬ್ಬಳೇ ಹೆಣ್ಣುಮಗಳು. ಅವಳ ಹೆಸರು ಸುಶೀಲೆ. ಗಂಡು ಹುಡುಗರೆಲ್ಲಾ ರಾಜಕುಮಾರರು. ಅವರು ನಕ್ಷತ್ರಗಳನ್ನು ಚಿತ್ರಿಸಿದ್ದ ಅಂಗಿಗಳನ್ನು ತೊಟ್ಟು ಶಾಲೆಗೆ ಹೋಗುತ್ತಿದ್ದರು. ಅವರ ಸೊಂಟಗಳಿಂದ ಕತ್ತಿಗಳು ನೇತಾಡುತ್ತಿದ್ದವು. ಅವರು ಬಂಗಾರದ ಹಲಗೆಗಳ ಮೇಲೆ ವಜ್ರದ ಬಳಪಗಳಿಂದ ಬರೆಯುತ್ತಿದ್ದರು. ಪುಸ್ತಕವಿದ್ದರೆ ಎಷ್ಟರ ಮಟ್ಟಿಗೆ ಓದಬಹುದೋ ಅಷ್ಟರಮಟ್ಟಿಗೆ ಪುಸ್ತಕವಿಲ್ಲದೆಯೇ ಓದುತ್ತಿದ್ದರು. ಅವರ ತಂಗಿ ಸುಶೀಲೆ ಕನ್ನಡಿಯಿಂದ ಮಾಡಿದ ಒಂದು ಸಣ್ಣ ಕಾಲ್ಮಣೆಯ ಮೇಲೆ ಕುಳಿತುಕೊಳ್ಳುತ್ತಿದ್ದಳು. ಅವಳ ಬಳಿ ಒಂದು ಬೊಂಬೆಯ ಪುಸ್ತಕವಿತ್ತು. ಅದರ ಬೆಲೆ ಒಂದು ಇಡೀ ರಾಜ್ಯದ ಅರ್ಧಭಾಗ! ಆಹಾ! ಆ ಮಕ್ಕಳು ಎಷ್ಟು ಸುಖವಾಗಿ ಬಾಳುತ್ತಿದ್ದರು! ಆದರೆ ಅವರು ಹಾಗೇ ಸುಖವಾಗಿ ಕೊನೆಯವರೆಗೂ ಇರುವಂತೆ ಇರಲಿಲ್ಲ. ಒಂದು ದಿನ ಅವರ ತಾಯಿ ತೀರಿಹೋದಳು.

ದೇಶಕ್ಕೆಲ್ಲಾ ದೊರೆಯಾದ ಅವರ ತಂದೆ ಎರಡನೆಯ ಸಲ ಮದುವೆ ಮಾಡಿಕೊಂಡ. ಅವನ ಹೊಸ ರಾಣಿ ಬಹಳ ಕೆಟ್ಟವಳು, ಮಾಟಗಾತಿ. ಈ ಮಕ್ಕಳನ್ನು ಕಂಡರೆ ಅವಳಿಗೆ ಸ್ವಲ್ಪವೂ ದಯೆಯಿರಲಿಲ್ಲ. ಈ ವಿಷಯ ಅವರಿಗೆ ಮೊದಲನೆಯ ದಿವಸವೇ ಗೊತ್ತಾಯಿತು. ಅರಮನೆಯಲ್ಲಿ ಎಲ್ಲೆಲ್ಲಿಯೂ ಸಂಭ್ರಮ. ಹುಡುಗರು ಎಲ್ಲರಂತೆ ತಾವೂ ಸಂತೋಷದಿಂದ ಇರಬೇಕೆಂದು ಆಶಿಸುತ್ತಿದ್ದರು. ರಾಣಿ ಅವರಿಗೆ ತಿನ್ನುವುದಕ್ಕೆ ಮರಳು ಕಳುಹಿಸಿಕೊಟ್ಟಳು. ಅವರು ಅದನ್ನು ತೆಗೆದುಕೊಂಡು ಅನ್ನವನ್ನು ತಿಂದಂತೆ ನಟಿಸಬೇಕಾಯಿತು.

ಮೂರನೆಯ ವಾರವೇ ಅವಳು ಸುಶೀಲೆಯನ್ನು ಒಬ್ಬ ಬಡ ರೈತನ ಮನೆಯಲ್ಲಿ ವಾಸಮಾಡಲು ಹಳ್ಳಿಗಾಡಿಗೆ ಕಳುಹಿಸಿದಳು. ಹುಡುಗರೆಲ್ಲಾ

ಕೆಟ್ಟವರೆಂದು ರಾಜನಿಗೆ ದೂರು ಹೇಳಿ ಅವರ ವಿಚಾರದಲ್ಲಿ ಅವನ ಮನಸ್ಸನ್ನು ಕೆಡಿಸಿದಳು. ರಾಜ ಅವರ ಸೌಖ್ಯದ ಕಡೆಗೆ ಗಮನಕೊಡುವುದನ್ನೇ ನಿಲ್ಲಿಸಿಬಿಟ್ಟ.

ಕಡೆಗೆ ರಾಣಿ ಹುಡುಗರನ್ನು ಕುರಿತು "ಹಾಳಾಗಿ; ಹಾರಿಹೋಗಿ; ನಿಮ್ಮ ಪೋಷಣೆ ನೀವೇ ಮಾಡಿಕೊಳ್ಳಿ. ಹಕ್ಕಿಗಳಂತೆ ಮೂಕರಾಗಿ ಹಾರಿ ಹೋಗಿ" ಎಂದು ಶಾಪವಿಟ್ಟಳು.

ಅವಳು ಅವರಿಗೆ ತಾನು ಇಷ್ಟಪಟ್ಟಷ್ಟು ಕೆಡುಕನ್ನುಂಟುಮಾಡಲು ಸಾಧ್ಯ ವಾಗಲಿಲ್ಲ. ಅವರು ಬಹಳ ಚೆಲುವಾದ ಹನ್ನೊಂದು ಕಾಡು ಹಂಸಗಳಾದರು. ವಿಲಕ್ಷಣವಾಗಿ ಕಿರಿಚುತ್ತಾ ಅರಮನೆಯ ಕಿಟಕಿಗಳ ಮೂಲಕ ಹೊರಕ್ಕೆ ಹಾರಿ, ಉದ್ಯಾನವನಗಳನ್ನು ದಾಟಿ, ಕಾಡಿನ ಕಡೆಗೆ ಹೋದರು.

ತಮ್ಮ ತಂಗಿ ಸುಶೀಲೆ ಮಲಗಿದ್ದ ರೈತನ ಮನೆಗೆ ಅವರು ಬರುವ ವೇಳೆಗೆ ಇನ್ನೂ ಬೆಳಕು ಹರಿದಿರಲಿಲ್ಲ ತಮ್ಮ ಉದ್ದವಾದ ಕತ್ತುಗಳನ್ನು ತಿರುಗಿಸುತ್ತಾ ರೆಕ್ಕೆಗಳನ್ನು ಬಡಿಯುತ್ತಾ ಮನೆಯ ಛಾವಣಿಯ ಮೇಲೆ ಹಾರಾಡಿದರು. ಅವರನ್ನು ಯಾರೂ ನೋಡಲಿಲ್ಲ. ಅವರ ಶಬ್ದವನ್ನೂ ಕೇಳಲಿಲ್ಲ. ಅವರು ಮತ್ತೊಮ್ಮೆ ಹಾರಿ, ಮೇಲೇರಿ, ಮೋಡಗಳ ಕಡೆಗೆ ಹೊರಟು ವಿಶಾಲವಾದ ಜಗತ್ತಿನಲ್ಲೆಲ್ಲಾ ಸಂಚರಿಸಿ, ಕಡೆಗೆ ಸಮುದ್ರದ ತೀರದ ವರೆಗೂ ಹಬ್ಬಿದ್ದ ದೊಡ್ಡದಾದ ಒಂದು ಕತ್ತಲೆಯ ಕಾಡನ್ನು ಸೇರಿದರು.

ಪಾಪ, ಸಣ್ಣ ಹುಡುಗಿ ಸುಶೀಲೆ ರೈತನ ಮನೆಯಲ್ಲಿ ನಿಂತು, ಒಂದು ಹಸುರೆಲೆಯನ್ನು ಹಿಡಿದು ಆಟವಾಡುತ್ತಿದ್ದಳು. ಅವಳಿಗೆ ಬೇರೆ ಆಟದ ಸಾಮಾನುಗಳೇ ಇರಲಿಲ್ಲ. ಎಲೆಯಲ್ಲಿ ಒಂದು ಕಿಂಡಿ ಮಾಡಿ ಅದರ ಮೂಲಕ ಸೂರ್ಯನನ್ನು ನೋಡಿದಳು. ಅವಳಿಗೆ ತನ್ನ ಅಣ್ಣಂದಿರ ಹೊಳೆಯುವ ಕಣ್ಣು ಗಳನ್ನು ಕಂಡ ಹಾಗಾಯಿತು. ಬೆಚ್ಚಗಿರುವ ಸೂರ್ಯನ ಕಿರಣಗಳು ಅವಳ ಕೆನ್ನೆಗಳ ಮೇಲೆ ಬಿದ್ದಾಗಲೆಲ್ಲಾ ಅವಳಿಗೆ ತನ್ನ ಅಣ್ಣಂದಿರು ಕೊಡುತ್ತಿದ್ದ ಮುತ್ತುಗಳ ನೆನಪಾಗುತ್ತಿತ್ತು. ಹೀಗೆಯೇ ದಿವಸದ ಮೇಲೆ ದಿವಸ ಕಳೆ ಯಿತು. ಮನೆಯ ಹೊರಗೆ ಬೆಳೆದಿದ್ದ ಗುಲಾಬಿಯ ಗಿಡಗಳಲ್ಲಿ ಗಾಳಿ ಹಾಯ್ದು ಹೋದಾಗ ಅದು, ಹೂಗಳನ್ನು ಕುರಿತು "ನಿಮ್ಮ ಚೆಲುವನ್ನು ಮೀರಿಸಿದವ ರಾರು?" ಎಂದು ಕೇಳುತ್ತಿತ್ತು. ಗುಲಾಬಿ "ಸುಶೀಲೆ" ಎನ್ನುತ್ತಿತ್ತು.

ಮುದುಕಿಯೊಬ್ಬಳು ಬಾಗಿಲ ಬಳಿ ಪುರಾಣ ಓದುತ್ತಾ ಕುಳಿತಿದ್ದಳು. ಗಾಳಿ ಪುರಾಣವನ್ನು "ನಿನಗಿಂತಲೂ ಹೆಚ್ಚು ಧರ್ಮಾತ್ಮರುಂಟೆ?" ಎಂದು ಕೇಳಿತು. ಪುರಾಣ "ಉಂಟು—ಸುಶೀಲೆ" ಎಂದಿತು. ಗುಲಾಬಿಯೂ ಪುರಾಣವೂ ನಿಜವನ್ನೇ ನುಡಿದವು.

ಸುಶೀಲೆಗೆ ಹದಿನೈದು ವರ್ಷ ವಯಸ್ಸಾದಾಗ ಅವಳು ಅರಮನೆಗೆ ಹಿಂದಿರುಗಬೇಕಾಗಿತ್ತು. ಅವಳ ಅಪಾರವಾದ ಚೆಲುವನ್ನು ಕಂಡು ರಾಣಿಗೆ ಬಹಳ ಕೋಪ ಬಂತು. ಅವಳ ಹೃದಯ ಅಸೂಯೆಯಿಂದಲೂ ದ್ವೇಷದಿಂದಲೂ ತುಂಬಿಹೋಯಿತು. ಸಾಧ್ಯವಾಗಿದ್ದರೆ ಸುಶೀಲೆಯನ್ನು ಅವಳ ಅಣ್ಣಂದಿರಂತೆಯೇ ಒಂದು ಕಾಡು ಹಂಸವನ್ನಾಗಿ ಮಾಡಿಬಿಡುತ್ತಿದ್ದಳು. ಆದರೆ ಕೂಡಲೆ ಹಾಗೆ ಮಾಡಲು ಅವಳಿಗೆ ಧೈರ್ಯವಿರಲಿಲ್ಲ. ಅಲ್ಲದೆ, ದೊರೆ ತನ್ನ ಮಗಳನ್ನು ನೋಡಬೇಕೆಂದು ಅಭಿಲಾಷೆಪಟ್ಟನು. ಸುಶೀಲೆ ಅರಮನೆಗೆ ಬಂದಳು.

ರಾಣಿ ಯಾವಾಗಲೂ ಮಂಜಾನೆಯಲ್ಲಿ ಸ್ನಾನಮಾಡಲು ಒಂದು ಕೊಳಕ್ಕೆ ಹೋಗುತ್ತಿದ್ದಳು. ಅದನ್ನು ಅಮೃತಶಿಲೆಯಿಂದ ಮಾಡಿದ್ದರು. ಅದರ ಮೇಲುಗಡೆ ಸುತ್ತಲೂ ಮೆತ್ತನೆಯ ಸುಪ್ಪತ್ತಿಗೆಯನ್ನೂ ಸುಂದರವಾದ ರತ್ನಗಂಬಳಿಗಳನ್ನೂ ಹಾಸಿದ್ದರು.

ರಾಣಿ ನೀರಿನಲ್ಲಿದ್ದ ಮೂರು ಏಡಿಗಳನ್ನು ಕೈಗೆ ತೆಗೆದುಕೊಂಡು, ಅದಕ್ಕೆ ಮುತ್ತಿಟ್ಟು, ಮೊದಲನೆಯದಕ್ಕೆ "ಸುಶೀಲೆ ಸ್ನಾನಕ್ಕೆ ಬಂದಾಗ ಅವಳ ತಲೆಯ ಮೇಲೆ ಕುಳಿತುಕೊ, ಅವಳೂ ನಿನ್ನಂತೆಯೇ ಸೋಮಾರಿಯಾಗಲಿ" ಎಂದು ಹೇಳಿದಳು. ಎರಡನೆಯದಕ್ಕೆ "ಅವಳ ಹಣೆಯ ಮೇಲೆ ಕುಳಿತುಕೊ, ಅವಳೂ ನಿನ್ನಂತೆ ಕುರೂಪಿಯಾಗಲಿ, ಆಮೇಲೆ ಅವಳ ತಂದೆಗೇ ಗುರುತು ಸಿಕ್ಕುವುದಿಲ್ಲ" ಎಂದಳು. ಮೂರನೆಯದಕ್ಕೆ "ಅವಳ ಎದೆಯ ಮೇಲೆ ಕುಳಿತುಕೊ, ಅವಳು ನನ್ನ ಮಾಟದ ಪೂರ್ಣ ಪ್ರಭಾವಕ್ಕೆ ಗುರಿಯಾಗಲಿ" ಎಂದಳು. ಅನಂತರ ಅವಳು ಆ ಏಡಿಗಳನ್ನು ತಿಳಿಯಾದ ನೀರಿನೊಳಕ್ಕೆ ಬಿಟ್ಟಳು. ಕೂಡಲೆ ನೀರೆಲ್ಲಾ ಹಸುರುಗೂಡಿತು. ಆಗ ಸುಶೀಲೆಯನ್ನು ಕರೆದು, ಅವಳ ಬಟ್ಟೆಗಳನ್ನು ಬಿಚ್ಚಿ, ಅವಳನ್ನು ನೀರಿನೊಳಕ್ಕೆ ಕಳುಹಿಸಿದಳು. ಸುಶೀಲೆ ನೀರಿನೊಳಗೆ ಮುಳುಗಿದಾಗ ಏಡಿಗಳಲ್ಲಿ ಒಂದು ಅವಳ ಕೂದಲಿನಲ್ಲಿ ಸೇರಿಕೊಂಡಿತು. ಇನ್ನೊಂದು ಅವಳ ಹಣೆಯನ್ನು ಏರಿತು, ಮೂರನೆಯದು ಅವಳ ಎದೆಯ

ಮೇಲೆ ಕುಳಿತಿತು. ಆದರೆ ಅವಳು ಎದ್ದು ನಿಂತ ಒಡನೆಯೇ ಮೂರು ಹಳದಿಯ ಹೂಗಳು ತೇಲುತ್ತಿದ್ದವು. ಆ ಏಡಿಗಳಿಗೆ ಮಾಟಗಾತಿ ಮುತ್ತಿಡದೆ ಇದ್ದಿದ್ದರೆ ಅವು ಕೆಂಪು ಗುಲಾಬಿಗಳಾಗುತ್ತಿದ್ದವು. ಈಗ ಅವು ವಿಷಮಯವಾಗಿದ್ದವು. ಆದರೂ ಸುಶೀಲೆಯನ್ನು ಮುಟ್ಟಿ ಅವಳ ತಲೆ ಹೃದಯಗಳ ಮೇಲೆ ಕುಳಿತಿದ್ದ ಮಾತ್ರಕ್ಕೇ ಅವು ಹೂಗಳಾದವು. ಅವಳು ಅಷ್ಟು ಗುಣಶಾಲಿಯೂ ಶೀಲವಂತಳೂ ಆಗಿದ್ದಳು. ಯಾವ ಮಂತ್ರವೂ ಅವಳನ್ನು ಏನೂ ಮಾಡುವ ಹಾಗಿರಲಿಲ್ಲ. ದುರುಳೆಯಾದ ರಾಣಿ ಇದನ್ನು ಕಂಡು, ಅವಳ ದೇಹಕ್ಕೆಲ್ಲಾ ಒಂದು ಬಗೆಯ ಎಣ್ಣೆಯನ್ನೂ ಮುಖಕ್ಕೆ ಒಂದು ಬಗೆಯ ರಸವನ್ನೂ ಸವರಿದಳು. ನೀಳವಾಗಿ ಇಳಿಯಬಿದ್ದಿದ್ದ ಅವಳ ಸೊಗಸಾದ ಕೂದಲನ್ನು ಜಡೆಯಾಗಿ ಹೆಣೆದುಬಿಟ್ಟಳು. ಸುಶೀಲೆಯನ್ನು ಗುರುತುಹಿಡಿಯುವುದೇ ಯಾರಿಗೂ ಸಾಧ್ಯವಾಗದ ಹಾಗಾಯಿತು. ಅವಳ ತಂದೆಯಂತೂ ಅವಳನ್ನು ನೋಡಿದಾಗ ದಿಗಿಲುಬಿದ್ದು "ಇವಳು ನನ್ನ ಮಗಳಾಗಿರಲಾರಳು" ಎಂದುಬಿಟ್ಟ. ಅವಳೊಡನೆ ಮಾತಾಡುವವರೇ ಇಲ್ಲದ ಹಾಗಾಯಿತು.

ಸುಶೀಲೆ ಅತ್ತು ಅತ್ತು ಕಳೆದುಹೋಗಿದ್ದ ತನ್ನ ಹನ್ನೊಂದು ಮಂದಿ ಅಣ್ಣಂದಿರನ್ನೂ ನೆನೆಸಿಕೊಂಡಳು. ಗೋಳಾಡುತ್ತಾ, ಅರಮನೆಯಿಂದ ಗುಟ್ಟಾಗಿ ಹೊರಬಿದ್ದು, ಕೆಸರುಧೂಳೆನ್ನದೆ ಕಲ್ಲುಮುಳ್ಳೆನ್ನದೆ ಹಗಲೆಲ್ಲಾ ಅಲೆದಲೆದು ಸಾಕಾಗಿ, ಕಡೆಗೆ ಒಂದು ದೊಡ್ಡ ಕಾಡನ್ನು ಸೇರಿದಳು. ತಾನು ಎಲ್ಲಿಗೆ ಹೋಗಬೇಕಾಗಿತ್ತೆಂಬುದು ಅವಳಿಗೆ ಸ್ವಲ್ಪವೂ ಗೊತ್ತಿರಲಿಲ್ಲ. ತನ್ನ ಹಾಗೆಯೇ ಅರಮನೆಯಿಂದ ಆಚೆಗೆ ಅಟ್ಟಿದ್ದ ತನ್ನ ಅಣ್ಣಂದಿರನ್ನು ಕಾಣಲು ತವಕಿಸುತ್ತಿದ್ದಳು. ಅವರನ್ನು ಕಂಡುಹಿಡಿಯಬೇಕೆಂದು ಮನಸ್ಸುಮಾಡಿದಳು. ಆದರೆ ಕಾಡಿಗೆ ಕಾಲಿಟ್ಟ ಸ್ವಲ್ಪ ಹೊತ್ತಿನಲ್ಲೇ ಕತ್ತಲಾಯಿತು. ದಾರಿ ತಪ್ಪಿತು. ಹಾಗೇ ಅಲ್ಲೇ ಮೆತ್ತನೆಯ ಹುಲ್ಲಿನ ಮೇಲೆ ಮಲಗಿ, ದೇವರನ್ನು ಪ್ರಾರ್ಥಿಸಿ, ಸಣ್ಣ ದಿಣ್ಣೆಯೊಂದರ ಮೇಲೆ ತಲೆಯಿಟ್ಟಳು. ಎಲ್ಲೆಲ್ಲೂ ನಿಶ್ಶಬ್ದತೆಯಿತ್ತು. ತಂಗಾಳಿ ಬೀಸುತ್ತಿತ್ತು. ನೂರಾರು ಮಿಂಚಿನ ಹುಳುಗಳು ಅವಳ ಸುತ್ತಲೂ ಹುಲ್ಲಿನಲ್ಲಿ ಹಸುರು ಬೆಂಕಿಯ ಕಿಡಿಗಳಂತೆ ಮಿಣುಕುತ್ತಿದ್ದವು. ಅವಳು ತನ್ನ ತಲೆಯಮೇಲಿದ್ದ ರೆಂಬೆಗಳಲ್ಲಿ ಒಂದನ್ನು ಮೆಲ್ಲನೆ ಕದಲಿಸಿದ ಕೂಡಲೆ ಹೊಳೆಯುವ ಆ ಸಣ್ಣ ಹುಳುಗಳು ನಕ್ಷತ್ರಗಳ ತುಂತುರು

ಹನಿಗಳಂತೆ ಅವಳ ಮೇಲೆ ಬಿದ್ದವು. ರಾತ್ರಿಯೆಲ್ಲಾ ಅವಳು ತನ್ನ ಅಣ್ಣಂದಿರ ವಿಷಯವಾಗಿ ಕನಸುಕಂಡಳು. ಕನಸಿನಲ್ಲಿ ಅವರೆಲ್ಲಾ ಮತ್ತೆ ಮಕ್ಕಳಾಗಿ ಆಡುತ್ತಿದ್ದರು. ಬಂಗಾರದ ಹಲಗೆಗಳ ಮೇಲೆ ವಜ್ರದ ಬಳಪಗಳಿಂದ ಬರೆಯುತ್ತಿದ್ದರು. ಅವಳು ಅರ್ಧರಾಜ್ಯ ಬೆಲೆಬಾಳುವ ತನ್ನ ಚಿತ್ರದ ಪುಸ್ತಕವನ್ನು ಕಂಡಳು. ಆದರೆ ಅವಳ ಅಣ್ಣಂದಿರು ಹಿಂದಿನಂತೆ ಈಗ ಗೆರೆಗಳನ್ನೂ ಸೊನ್ನೆಗಳನ್ನೂ ಬರೆಯುತ್ತಿರಲಿಲ್ಲ. ತಾವು ಮಾಡಿದ್ದ ಧೀರವಾದ ಸಾಹಸ ಕಾರ್ಯಗಳನ್ನೂ ತಾವು ನೋಡಿ ಅನುಭವಿಸಿದ್ದ ವಿಷಯಗಳನ್ನೂ ವರ್ಣಿಸಿ ಬರೆಯುತ್ತಿದ್ದರು. ಅವಳ ಬೊಂಬೆಯ ಪುಸ್ತಕದಲ್ಲಿ ಇದ್ದುದೆಲ್ಲಾ ಸಜೀವವಾಗಿತ್ತು. ಪಕ್ಷಿಗಳು ಹಾರಾಡುತ್ತಿದ್ದವು, ಜನಗಳು ಪುಸ್ತಕದಿಂದ ಎದ್ದು ಹೊರಕ್ಕೆ ನಡೆದು ಬಂದು ಸುಶೀಲೆಯೊಡನೆಯೂ ಅವಳ ಅಣ್ಣಂದಿರೊಡನೆಯೂ ಮಾತಾಡುತ್ತಿದ್ದರು. ಅವಳು ಹಾಳೆಗಳನ್ನು ತಿರುವಿಹಾಕಿದಾಗ ಅವರು ಮತ್ತೆ ಮತ್ತೆ ತಮ್ಮ ಮೊದಲಿನ ಸ್ಥಳಗಳಿಗೆ ಸರಿದ ಬಿಡುತ್ತಿದ್ದರು.

ಅವಳಿಗೆ ಎಚ್ಚರವಾದಾಗ ಆಗಲೇ ಹೊತ್ತೇರಿತ್ತು. ಆದರೆ ಸೂರ್ಯ ಅವಳಿಗೆ ಕಾಣಿಸುತ್ತಿರಲಿಲ್ಲ. ಏಕೆಂದರೆ ಎತ್ತರವಾದ ಕಾಡುಮರಗಳ ರೆಂಬೆಗಳು ಸೂರ್ಯ ಕಿರಣಗಳನ್ನೂ ಕೆಳಕ್ಕೆ ಬಿಡದಷ್ಟು ದಟ್ಟವಾಗಿ ಬೆಳೆದಿದ್ದವು. ಆದರೆ ಅರಣ್ಯದ ಆಚೆ ಸುತ್ತಲೂ ಸೂರ್ಯರಶ್ಮಿಯ ಬಂಗಾರದ ಬಣ್ಣದ ಮಸುಕು ಕಾಂತಿ ಬೆಳಗುತ್ತಿತ್ತು. ಗಾಳಿ ಹಸರು ಹುಲ್ಲಿನ ಮತ್ತು ಹಸುರೆಲೆಗಳ ಹೊಸ ಸುವಾಸನೆಯಿಂದ ಕೂಡಿತ್ತು. ಹಕ್ಕಿಗಳು ಅವಳ ಭುಜಗಳ ಮೇಲೆಯೇ ಕುಳಿತುಕೊಳ್ಳುವ ಹಾಗೆ ತೋರುತ್ತಿದ್ದವು. ಹತ್ತಿರದಲ್ಲೇ ಅನೇಕ ಸಣ್ಣ ಹಳ್ಳಗಳು ಹರಿದು ಸುಂದರವಾದ ಮರಳಿನ ತಳವಿದ್ದ ಒಂದು ಕೊಳವನ್ನು ಸೇರುತ್ತಿದ್ದವು. ಅದರ ಅಲೆಗಳ ಶಬ್ದ ಅವಳಿಗೆ ಕೇಳಿಬರುತ್ತಿತ್ತು. ಕೊಳದ ಸುತ್ತಲೂ ಪೊದೆಗಳು ದಟ್ಟವಾಗಿ ಬೆಳೆದಿದ್ದುವು. ಅವುಗಳ ನಡುವೆ ಒಂದು ಕಡೆ ಜಿಂಕೆಗಳು ಓಡಾಡಲು ದಾರಿ ಮಾಡಿದ್ದವು. ಸುಶೀಲೆ ಆ ಹಾದಿಯಲ್ಲಿ ನಡೆದು ನೀರಿನ ಬಳಿಗೆ ಹೋದಳು. ನೀರು ಬಹಳ ತಿಳಿಯಾಗಿತ್ತು. ಮೇಲಿನ ಮರಗಳ ಪ್ರತಿಯೊಂದು ಎಲೆಯೂ ಚಿತ್ರದಂತೆ ಕೊಳದಲ್ಲಿ ಪ್ರತಿಬಿಂಬಿತವಾಗಿತ್ತು.

ನೀರಿನಲ್ಲಿ ತನ್ನ ಮುಖವನ್ನು ನೋಡಿಕೊಂಡ ಒಡನೆ ಸುಶೀಲೆಗೆ ದಿಗಿಲಾಯಿತು. ಏಕೆಂದರೆ ಅದು ಕಂದು ಬಣ್ಣದಿಂದ ಕುರೂಪವಾಗಿ ಕಂಡಿತು. ತನ್ನ ಪುಟ್ಟ ಕೈಯನ್ನು ನೀರಿನಲ್ಲಿ ಅದ್ದಿ ಅದರಿಂದ ಕಣ್ಣನ್ನೂ ಹಣೆಯನ್ನೂ ಒರೆಸಿಕೊಂಡಳು. ಕೂಡಲೆ ಅವಳ ಬಿಳಿಯ ಚರ್ಮ ಹೊಳೆಯತೊಡಗಿತು. ಆಗ ಬಟ್ಟೆಗಳನ್ನೆಲಾ ಬಿಚ್ಚಿಟ್ಟು ನೀರಿನೊಳಕ್ಕೆ ಇಳಿದಳು. ಮೇಲೆ ಬಂದಾಗ ಅವಳಿಗಿಂತಲೂ ಚೆಲುವೆಯಾದ ರಾಜಕುಮಾರಿ ಜಗತ್ತಿನಲ್ಲಿ ಇನ್ನಾರೂ ಇರಲಿಲ್ಲ.

ಸುಶೀಲೆ ಮೇಲೆ ಬಂದು ಮತ್ತೆ ಬಟ್ಟೆಗಳನ್ನು ತೊಟ್ಟು ಜೆಡೆ ಹೆಣೆದುಕೊಂಡು. ಥಳಥಳಿಸುವ ಒಂದು ಹಳ್ಳದ ಬಳಿಗೆ ಹೋಗಿ ಅಂಗೈಯಲ್ಲಿ ಸ್ವಲ್ಪ ನೀರೆತ್ತಿ ಕುಡಿದಳು. ಅನಂತರ ಅರಣ್ಯದಲ್ಲಿ ಅಲೆದಾಡತೊಡಗಿದಳು. ತಾನು ಎಲ್ಲಿಗೆ ಹೋಗುತ್ತಿರುವೆನೆಂಬುದರ ಅರಿವು ಅವಳಿಗೆ ಸ್ವಲ್ಪವಾದರೂ ಇರಲಿಲ್ಲ. ಅಣ್ಣಂದಿರನ್ನು ನೆನಸಿಕೊಂಡಳು. ದಯಾಮಯನಾದ ದೇವರು ತನ್ನನ್ನು ಕೈಬಿಡಲಾರನೆಂದು ಆಲೋಚಿಸಿದಳು. ದೇವರು ಹಸಿದವರು ತಿನ್ನುವುದಕ್ಕಾಗಿಯೇ ಕಾಡು ಸೇಬುಗಳನ್ನು ಬೆಳೆಸಿದ್ದ. ಹಣ್ಣುಗಳ ಭಾರದಿಂದ ಬಾಗಿಹೋಗಿದ್ದ ರೆಂಬೆಗಳುಳ್ಳ ಒಂದು ಮರವನ್ನು ತೋರಿಸಿದ. ಇಲ್ಲಿ ಅವಳು ತನ್ನ ಮಧ್ಯಾಹ್ನದ ಊಟವನ್ನು ಮುಗಿಸಿದಳು. ಹಣ್ಣಿನ ತೂಕದಿಂದ ರೆಂಬೆಗಳು ಮುರಿದು ಬೀಳದಂತೆ ಅವುಗಳ ಕೆಳಗೆ ಊರೆಗೋಲುಗಳನ್ನು ನಿಲ್ಲಿಸಿ, ಕಾಡಿನ ಅತ್ಯಂತ ದಟ್ಟವಾದ ಪ್ರದೇಶಕ್ಕೆ ನಡೆದುಹೋದಳು. ಅಲ್ಲಿ ಬಹಳ ನಿಶ್ಶಬ್ದವಾಗಿತ್ತು. ಅವಳ ಹೆಜ್ಜೆಯ ಸಪ್ಪುಳ ಅವಳಿಗೇ ಕೇಳಿಸುವಂತಿತ್ತು. ಕಾಲ ಕೆಳಗಿನ ತರಗೆಲೆಗಳು ಕರಕರ ಶಬ್ದಮಾಡಿದವು. ಅಲ್ಲಿ ಒಂದು ಹಕ್ಕಿ ಕೂಡ ಇರಲಿಲ್ಲ. ಎಲೆಗಳನ್ನು ಉಟ್ಟಿದ್ದ ರೆಂಬೆಗಳು ಒಂದು ಸಣ್ಣ ಸೂರ್ಯ ಕಿರಣವನ್ನೂ ಕೆಳಕ್ಕೆ ಬರಗೊಡುತ್ತಿರಲಿಲ್ಲ. ಸುತ್ತಲೂ ದಪ್ಪವಾದ ಬೇಲಿಯ ಕಂಬಗಳಂತೆ ಮರಗಳು ಎತ್ತರವಾಗಿ ಬೆಳೆದಿದ್ದವು. ಅಲ್ಲಿ ಇದ್ದಂತಹ ಏಕಾಂತತೆಯನ್ನು ಅವಳು ಹಿಂದೆ ಎಲ್ಲಿಯೂ ಕಂಡಿರಲಿಲ್ಲ.

ರಾತ್ರಿ ಕತ್ತಲಿನಿಂದ ಕೂಡಿತ್ತು. ಮಿಣುಕು ಹುಳು ಒಂದೂ ಇರಲಿಲ್ಲ. ಅವಳು ನಿದ್ದೆಹೋಗಬೇಕೆಂದು ಮಲಗಿದಳು. ತನ್ನ ಮೇಲಿದ್ದ ರೆಂಬೆಗಳನ್ನು ಸರಿಸಿ, ದೇವದೇವನು ಅವನ ಕರುಣಾಮಯವಾದ ಕಣ್ಣುಗಳಿಂದ ತನ್ನನ್ನು

ನೋಡಿದಂತೆ ಅವಳಿಗೆ ತೋರಿತು. ಅವನ ತಲೆಯ ಮೇಲೂ ಕಂಕುಳಲ್ಲೂ ಪುಟ್ಟ ಪುಟ್ಟ ದೇವತೆಗಳ ತಲೆಗಳು ಕಂಡುಬಂದವು.

ಬೆಳಗ್ಗೆ ಎದ್ದಾಗ, ಅದು ಕನಸೋ ನಿಜವಾಗಿ ನಡೆದ ಸಂಗತಿಯೋ ಎಂಬುದು ಅವಳಿಗೇ ಗೊತ್ತಿರಲಿಲ್ಲ.

ಸುಶೀಲೆ ಸ್ವಲ್ಪ ಮುಂದೆ ನಡೆದಳು. ಬುಟ್ಟಿಯ ತುಂಬಾ ಒಣಗಿದ ಹಣ್ಣುಗಳನ್ನು ಹಿಡಿದಿದ್ದ ಮುದುಕಿಯೊಬ್ಬಳು ಎದುರಿಗೆ ಬಂದಳು. ಅವಳು ಸುಶೀಲೆಗೆ ಕೆಲವು ಹಣ್ಣುಗಳನ್ನು ಕೊಟ್ಟಳು. ಸುಶೀಲೆ "ಹನ್ನೊಂದು ಜನ ರಾಜಕುಮಾರರು ಕುದುರೆಯ ಮೇಲೆ ಕುಳಿತು ಕಾಡಿನಲ್ಲಿ ಹೋಗುವುದನ್ನು ನೀನು ಕಂಡೆಯಾ?" ಎಂದು ಅವಳನ್ನು ಕೇಳಿದಳು. ಮುದುಕಿ "ಇಲ್ಲ. ಆದರೆ, ನಿನ್ನೆಯ ದಿನ ಹನ್ನೊಂದು ಹಂಸಗಳನ್ನು ನೋಡಿದೆ. ಅವುಗಳ ತಲೆಗಳ ಮೇಲೆ ಚಿನ್ನದ ಕಿರೀಟಗಳಿದ್ದವು. ಅವು ಇಲ್ಲೇ ಹತ್ತಿರದಲ್ಲಿರುವ ಹಳ್ಳದಲ್ಲಿ ಈಜಾಡುತ್ತಿದ್ದವು" ಎಂದು ಹೇಳಿದಳು.

ಹೀಗೆ ಹೇಳಿ, ಅವಳು ಸುಶೀಲೆಯನ್ನು ಕಾಡಿನ ಕೆಳಭಾಗದಲ್ಲಿ ಸುಳಿ ಸುಳಿದು ಹರಿಯುತ್ತಿದ್ದ ಹಳ್ಳದ ಬಳಿಗೆ ಕರೆದೊಯ್ದಳು. ಎರಡು ದಡಗಳ ಮರಗಳೂ ತಮ್ಮ ವಿಪುಲವಾದ ಎಲೆಗಳಿಂದ ಕೂಡಿದ ಕೊಂಬೆಗಳನ್ನು ಒಂದರ ಕಡೆಗೆ ಇನ್ನೊಂದರಂತೆ ಚಾಚಿದ್ದವು. ಒಂದನ್ನು ಇನ್ನೊಂದು ಮುಟ್ಟಲು ಅಸಾಧ್ಯವಾದಾಗ, ಅವು ನೆಲದಿಂದ ತಮ್ಮ ಬೇರುಗಳನ್ನೇ ಮೇಲಕ್ಕೆ ಕಿತ್ತುಬಿಟ್ಟು, ನೀರಿನ ಮೇಲೆ ಬಾಗಿ, ಒಂದರೊಡನೊಂದು ಪರಸ್ಪರ ಹೆಣೆದುಕೊಂಡಿದ್ದವು.

ಸುಶೀಲೆ ಮುದುಕಿಗೆ ನಮಸ್ಕರಿಸಿ, ಅವಳನ್ನು ಬೀಳ್ಕೊಟ್ಟು, ನದಿ ಸಮುದ್ರವನ್ನು ಸೇರುವವರೆಗೂ ಅದರ ದಡದ ಮೇಲೆಯೇ ನಡೆದುಹೋದಳು.

ಸುಂದರವಾದ ವಿಸ್ತಾರವಾದ ಸಮುದ್ರ ಹುಡುಗಿಯ ಎದುರಿಗೆ ಹಬ್ಬಿತ್ತು. ಆದರೆ ಅದರ ಮೇಲೆ ಒಂದಾದರೂ ಹಡಗಾಗಲಿ ದೋಣಿಯಾಗಲಿ ಕಂಡುಬರಲಿಲ್ಲ. ಅವಳು ಮುಂದೆ ಹೋಗುವುದಾದರೂ ಹೇಗೆ? ತೀರದ ಮೇಲೆ ಬಿದ್ದಿದ್ದ ಲೆಕ್ಕವಿಲ್ಲದಷ್ಟು ನೊರಜುಗಲ್ಲುಗಳನ್ನು ನೋಡಿದಳು. ಅವು ನೀರಿನ ಹೊಡೆತಕ್ಕೆ ಸಿಕ್ಕಿ ಗುಂಡಗೆ ನುಣ್ಣಗೆ ಆಗಿದ್ದವು. ನೀರು ಅವಳ ಪುಟ್ಟ ಕೈಗಳಿಗಿಂತಲೂ ಹೆಚ್ಚು ಮೃದುವಾಗಿತ್ತು. "ಒಂದು ಕ್ಷಣ

ಕೂಡ ಬಿಡುವಿಲ್ಲದೆ ಹಿಂದಕ್ಕೋ ಮುಂದಕ್ಕೋ ಸರಿದಾಡುತ್ತಿದ್ದರೂ ಈ ನೀರಿಗೆ ಆಯಾಸವೇ ಇಲ್ಲ. ಇದರಿಂದ ಗಟ್ಟಿಯಾದುದೆಲ್ಲಾ ಮೃದುವಾಗುತ್ತದೆ. ನಾನೂ ಇದರಂತೆ ನಿರಾಯಾಸಳಾಗಿರುತ್ತೇನೆ. ಓ, ಮುಂದೆಮುಂದೆ ನುಗ್ಗಿ ಬರುತ್ತಿರುವ ಅಲೆಗಳೆ, ನೀವು ನನಗೆ ಕಲಿಸಿರುವ ಪಾಠಕ್ಕಾಗಿ ನಿಮಗೆ ಅನಂತ ವಂದನೆಗಳು! ಯಾವಾಗಲಾದರೂ ಒಮ್ಮೆ ನೀವು ನನ್ನನ್ನು ನನ್ನ ನೆಚ್ಚಿನ ಸಹೋದರರ ಬಳಿಗೆ ಕರೆದೊಯ್ಯುವಿರೆಂದು ನನ್ನ ಹೃದಯ ಹೇಳುತ್ತಿದೆ" ಎಂದು ಅವಳು ತೆರೆಗಳಿಗೆ ಕೈಮುಗಿದಳು.

ಸಮುದ್ರದ ಕರೆಯ ಜೊಂಡಿನ ಮೇಲೆ ಹನ್ನೊಂದು ಬಿಳಿಯ ಹಂಸಗಳ ಗರಿಗಳು ಬಿದ್ದಿದ್ದವು. ಅವಳು ಅವನ್ನು ಆಯ್ದುಕೊಂಡು ಅವುಗಳಿಂದ ಒಂದು ಗೊಂಚಲನ್ನು ಮಾಡಿದಳು. ಅವುಗಳ ಮೇಲೆ ನೀರಿನ ಹನಿಗಳು ಇನ್ನೂ ಕುಳಿತಿದ್ದವು. ಇವು ಮಂಜಿನ ಹನಿಗಳೋ ಕಣ್ಣೀರ ಹನಿಗಳೋ ಯಾರೂ ಹೇಳುವಂತಿರಲಿಲ್ಲ. ಆ ತೀರ ಬಹಳ ಗಂಭೀರವಾಗಿ ಏಕಾಂತಮಯವಾಗಿತ್ತು. ಆದರೆ ಅವಳಿಗೆ ಅದರಿಂದ ಹೆದರಿಕೆಯಾಗಲಿಲ್ಲ. ಏಕೆಂದರೆ ಸಮುದ್ರ ಸದಾ ಬದಲಾಯಿಸುತ್ತಲೇ ಇತ್ತು. ನಾಡಿನೊಳಗಿನ ಸಿಹಿನೀರಿನ ಸರೋವರವೊಂದರಲ್ಲಿ ಒಂದು ವರ್ಷ ಕಾಲದಲ್ಲಿ ಆಗುವಷ್ಟು ಬದಲಾವಣೆಗಳು ಇಲ್ಲಿ ಒಂದೆರಡು ಗಂಟೆಗಳಲ್ಲೇ ಆಗುತ್ತಿದ್ದವು. ಒಮ್ಮೆ ದೊಡ್ಡದೊಂದು ಕಪ್ಪನೆಯ ಮುಗಿಲು ಬಂದರೆ ಅರೆತಾಸಿನಲ್ಲಿ ಗಾಳಿ ಬೀಸಿ ಅದನ್ನು ಓಡಿಸಿಬಿಡುತ್ತಿತ್ತು. ಮತ್ತೆ ಅಲೆಗಳು ತಮ್ಮ ಬೆಳ್ಳನೆಯ ಮೇಲ್ಭಾಗವನ್ನು ತೋರಿಸುತ್ತಿದ್ದವು. ಗಾಳಿ ನಿಂತು, ಮೋಡಗಳು ಕೆಂಪಾದಾಗ ಸಮುದ್ರ ಗುಲಾಬಿಯ ಎಲೆಯಂತೆ ಈಗ ಬಿಳುಪಾಗಿ, ಇನ್ನೊಮ್ಮೆ ಹಸುರಾಗಿ, ಕಾಣುತ್ತಿತ್ತು. ಆದರೆ, ಅದು ಎಷ್ಟು ಗಂಭೀರವಾಗಿದ್ದರೂ ತೀರದ ಬಳಿ ಸ್ವಲ್ಪವಾದರೂ ಚಲನೆ ಇರುತ್ತಲೇ ಇತ್ತು. ನೀರು ಮಲಗಿರುವ ಮಗುವಿನ ಎದೆಯಂತೆ ಮೆಲ್ಲನೆ ಮೇಲಕ್ಕೆದ್ದು ಕೆಳಗಿಳಿಯುತ್ತಿತ್ತು.

ಸೂರ್ಯ ಇಳಿಯುವ ಸಮಯಕ್ಕೆ ಸರಿಯಾಗಿ ಹನ್ನೊಂದು ಕಾಡು ಹಂಸಗಳು ಸಮುದ್ರದ ದಿಕ್ಕಿನಿಂದ ತೀರದ ಕಡೆಗೆ ಹಾರಿಬರುತ್ತಿದ್ದುದನ್ನು ಸುಶೀಲೆ ಕಂಡಳು. ಅವುಗಳ ತಲೆಗಳ ಮೇಲೆ ಚಿನ್ನದ ಕಿರೀಟಗಳಿದ್ದುವು. ಅವು ಸಾಲಾಗಿ ಬಿಳಿಯ ದಾರದ ತೆರದಲ್ಲಿ ಒಂದರ ಹಿಂದೊಂದು ಹಾರುತ್ತಿದ್ದವು.

ಸುಶೀಲೆ ತೀರದ ತುದಿಗೆ ಏರಿ ಒಂದು ಪೊದೆಯ ಹಿಂದೆ ಹುದುಗಿಕೊಂಡಳು. ಹಂಸಗಳು ಅವಳ ಸಮೀಪದಲ್ಲೇ ಬಂದು ಕುಳಿತು ತಮ್ಮ ದೊಡ್ಡ ಬಿಳಿಯ ರೆಕ್ಕೆಗಳನ್ನು ಬಡಿಯುತ್ತೊಡಗಿದವು.

ಸೂರ್ಯ ನೀರಿನೊಳಗೆ ಮುಳುಗಿದೊಡನೆಯೇ ಆ ಹಂಸಗಳು ತಮ್ಮ ಗರಿಗಳನ್ನು ಕಳಚಿಹಾಕಿ ಸುಂದರರಾದ ಹನ್ನೊಂದು ಮಂದಿ ರಾಜಕುಮಾರರಾದವು. ಅವರೇ ಸುಶೀಲೆಯ ಅಣ್ಣಂದಿರು. ಅವರು ಬಹಳವಾಗಿ ಬದಲಾಯಿಸಿದ್ದರೂ ಅವಳು ಅವರನ್ನು ಕೂಡಲೇ ಗುರುತು ಹಿಡಿದಳು. ಅವರು ತನ್ನ ಅಣ್ಣಂದಿರೇ ಆಗಿರಬೇಕೆಂದು ಅವಳಿಗೆ ತೋರಿತು. ಅವರನ್ನು ಅವಳು ಹೆಸರು ಹಿಡಿದು ಕೂಗಿ ಅವರ ತೋಳುಗಳಿಗೆ ಹಾರಿದಳು. ಅವರು ಇಷ್ಟು ದೊಡ್ಡವಳಾಗಿ ಚೆಲುವೆಯಾಗಿ ಬೆಳೆದಿದ್ದ ತಮ್ಮ ಪುಟ್ಟ ತಂಗಿಯನ್ನು ಗುರುತಿಸಿ ಸಂತೋಷಭರಿತರಾದರು. ಒಬ್ಬರನ್ನೊಬ್ಬರು ನೋಡಿ ನಕ್ಕು, ಅತ್ತು, ತಮ್ಮ ಮಲತಾಯಿ ತಮ್ಮನ್ನು ಎಷ್ಟು ಕೆಟ್ಟ ರೀತಿಯಲ್ಲಿ ಕಂಡಳೆಂದು ಒಬ್ಬರಿಗೊಬ್ಬರು ಹೇಳಿಕೊಂಡರು.

ಅನಂತರ ಅವರಲ್ಲಿ ಹಿರಿಯುವನು ಅವಳಿಗೆ ತಮ್ಮ ಸ್ಥಿತಿಯನ್ನು ವರ್ಣಿಸಿದ. "ನಾವು—ಅಣ್ಣ ತಮ್ಮಂದಿರೆಲ್ಲಾ—ಸೂರ್ಯ ದಿಗಂತದಲ್ಲಿರುವ ವರೆಗೂ ಹಂಸಗಳ ವೇಷದಲ್ಲಿ ಹಾರಾಡುತ್ತಿರಬೇಕು. ಸೂರ್ಯಾಸ್ತವಾದಾಗ ನಾವು ನಮ್ಮ ಮನುಷ್ಯ ರೂಪಗಳನ್ನು ಪುನಃ ಪಡೆಯುತ್ತೇವೆ. ಆದ್ದರಿಂದ ನಾವು ಯಾವಾಗಲೂ ಸೂರ್ಯಾಸ್ತದ ಸಮಯಕ್ಕೆ ಸರಿಯಾಗಿ ಒಂದು ವಿಶ್ರಾಂತಿಯ ಸ್ಥಳವನ್ನು ಹುಡುಕುತ್ತಿರಬೇಕು. ಏಕೆಂದರೆ ಆ ಸಮಯದಲ್ಲಿ ನಾವು ಮೇಲೆ ಹಾರುತ್ತಿದ್ದರೆ ಕೆಳಗುರುಳುವುದು ಖಂಡಿತ. ನಾವು ಇಲ್ಲಿ ವಾಸಿಸುವುದಿಲ್ಲ. ಸಮುದ್ರದ ಆಚೆ ಇದರಷ್ಟೇ ಸುಂದರವಾದ ಇನ್ನೊಂದು ದೇಶವಿದೆ. ಆದರೆ ಅದರ ದಾರಿ ಬಹಳ ದೂರ. ಅದನ್ನು ಸೇರಬೇಕಾದರೆ ನಾವು ಮಹಾಸಾಗರವನ್ನು ದಾಟಿ ಹೋಗಬೇಕು. ದಾರಿಯಲ್ಲಿ ನಮಗೆ ರಾತ್ರಿಯನ್ನು ಕಳೆಯುವುದಕ್ಕೆ ಒಂದು ದ್ವೀಪ ಕೂಡ ಸಿಕ್ಕುವುದಿಲ್ಲ. ಅರ್ಧ ದಾರಿಯಲ್ಲಿ ಒಂದೇ ಒಂದು ಸಣ್ಣ ಬಂಡೆ ನೀರಿನಿಂದ ಮೇಲೆದ್ದು ಚಾಚಿಕೊಂಡಿದೆ. ಅದರ ಮೇಲೆ ನಾವೆಲ್ಲರೂ ಒಟ್ಟಿಗೆ ನಿಂತುಕೊಳ್ಳಲು ಮಾತ್ರ ಸಾಧ್ಯ. ಸಮುದ್ರ ಮೇಲೇರಿದಾಗ ನೀರು ನಮ್ಮ ಮೇಲೆಯೇ ಒಂದು ಬಡಿಯುವುದು. ಆದರೂ ಅದಕ್ಕಾಗಿ

ನಾವು ದೇವರನ್ನು ವಂದಿಸುತ್ತೇವೆ. ನಾವು ಅಲ್ಲಿ ನಮ್ಮ ಮನುಷ್ಯರೂಪದಲ್ಲಿ ರಾತ್ರಿಯನ್ನೆಲ್ಲಾ ಕಳೆಯುತ್ತೇವೆ. ಅದಿಲ್ಲದಿದ್ದರೆ ನಮ್ಮ ಪ್ರೀತಿಪಾತ್ರವಾದ ತಾಯಿನಾಡನ್ನು ಕಾಣಲು ನಮಗೆ ಆಗುತ್ತಲೇ ಇರಲಿಲ್ಲ. ಏಕೆಂದರೆ ನಮ್ಮ ಪ್ರಯಾಣ ಎರಡು ದಿನ ಪೂರ್ತಿ ಹಿಡಿಯುತ್ತದೆ. ನಾವು ನಮ್ಮ ಜನ್ಮಭೂಮಿಗೆ ವರ್ಷಕ್ಕೆ ಒಂದು ಸಾರಿ ಮಾತ್ರ ಹೋಗಿಬರಬಹುದು. ಅಲ್ಲಿ ನಾವಿರುವುದು ಹನ್ನೊಂದು ದಿವಸಗಳು ಮಾತ್ರ. ಹೆಚ್ಚು ಕಾಲ ನಿಲ್ಲುವ ಧೈರ್ಯ ನಮಗಿಲ್ಲ. ನಾವು ಇಲ್ಲಿಗೆ ಬಂದು ಈ ಮಹಾರಣ್ಯದ ಮೇಲೆ ಹಾರಾಡುತ್ತೇವೆ. ಇಲ್ಲಿಂದ ನಾವು ಹುಟ್ಟಿದ ಮತ್ತು ನಮ್ಮ ತಂದೆ ವಾಸಿಸುತ್ತಿರುವ ಅರಮನೆ ಕಾಣಿಸುತ್ತದೆ. ಅದರಿಂದ ಆಚೆ ನಮ್ಮ ತಾಯಿಯ ಸಮಾಧಿಯಿರುವ ಮಂದಿರದ ಎತ್ತರವಾದ ಗೋಪುರಗಳನ್ನು ನಾವು ನೋಡಬಹುದು. ಇಲ್ಲಿರುವ ಮರಗಿಡಗಳೂ ಪೊದೆಗಳೂ ನಮ್ಮ ಬಂಧುಗಳೆಂದು ನಾವು ಭಾವಿಸುತ್ತೇವೆ. ನಾವು ನಮ್ಮ ಚಿಕ್ಕಂದಿನಲ್ಲಿ ನೋಡುತ್ತಿದ್ದಂತೆಯೇ ಈಗಲೂ ಕಾಡುಕುದುರೆಗಳು ನಾಗಾಲೋಟದಿಂದ ಓಡುತ್ತವೆ. ನಾವು ಮಕ್ಕಳಾಗಿದ್ದಾಗ ಕೇಳಿ ಕುಣಿಯುತ್ತಿದ್ದ ಹಾಡುಗಳನ್ನು ಹಕ್ಕಿಗಳು ಈಗಲೂ ಹಾಡುತ್ತವೆ. ಇದೇ ನಮ್ಮ ಜನ್ಮಭೂಮಿ. ನಾವು ಇಲ್ಲಿಗೆ ಬಂದಿದ್ದೇವೆ. "ಓ, ನಮ್ಮ ನಚ್ಚಿನ ಸೋದರಿ, ಇಲ್ಲಿ ನಿನ್ನನ್ನು ಮತ್ತೆ ಕಂಡಿದ್ದೇವೆ. ನಾವು ಇಲ್ಲಿ ಇನ್ನೆರಡು ದಿನ ಇರಬಹುದು. ಅನಂತರ ಮತ್ತೆ ಸಾಗರವನ್ನು ದಾಟಿ ಹಾರಿಹೋಗಬೇಕು. ನಾವು ಹೋಗುವುದೂ ಸುಂದರವಾದ ದೇಶವೆಂಬುದೇನೋ ದಿಟ. ಆದರೆ ಅದು ನಮ್ಮ ಜನ್ಮಭೂಮಿಯಲ್ಲ! ನಾವು ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವುದಾದರೂ ಹೇಗೆ? ನಮ್ಮ ಬಳಿ ಹಡಗಾಗಲಿ ದೋಣಿಯಾಗಲಿ ಇಲ್ಲ!" ಎಂದ.

ಸುಶೀಲೆ "ನಾನು ನಿಮ್ಮನ್ನು ಹೇಗೆತಾನೆ ಬಿಡುಗಡೆಮಾಡಲಿ?" ಎಂದಳು. ಅವರು ಒಬ್ಬರೊಡನೊಬ್ಬರು ರಾತ್ರಿಯೆಲ್ಲಾ ಮಾತಾಡುತ್ತಿದ್ದರು. ಎಲ್ಲಿಯೋ ಒಂದೆರಡು ಗಂಟೆಗಳ ಕಾಲ ಸ್ವಲ್ಪ ಜೋಂಪು ಹತ್ತಿ ನಿದ್ದೆ ಮಾಡಿದರು, ಅಷ್ಟೆ.

ಬೆಳಕು ಹರಿದಾಗ ಅವಳ ತಲೆಯ ಮೇಲೆ ಹಂಸಗಳು ರೆಕ್ಕೆ ಮಾಡುತ್ತಿದ್ದ ಶಬ್ದದಿಂದ ಸುಶೀಲೆಗೆ ಎಚ್ಚರಿಕೆಯಾಯಿತು. ಅವಳ ಅಣ್ಣಂದಿರು ಪುನಃ

ಬದಲಾವಣೆ ಹೊಂದಿ ಹಕ್ಕಿಗಳಾಗಿಬಿಟ್ಟಿದ್ದರು. ಅವರು ಆಗ ಆಕಾಶದಲ್ಲಿ ಚಕ್ರಾಕಾರವಾಗಿ ಸುತ್ತಾಡುತ್ತಿದ್ದರು. ಸ್ವಲ್ಪ ಹೊತ್ತಿನ ಅನಂತರ ದೂರ ಹಾರಿಹೋಗಿ ಅವಳ ಕಣ್ಣಿಗೆ ಕಾಣದಾದರು. ಅವರಲ್ಲಿ ಕಡೆಯವನು ಹಿಂದೆ ನಿಂತ. ಅವನು ತನ್ನ ತಲೆಯನ್ನು ಅವಳ ಎದೆಯ ಮೇಲಿಟ್ಟ. ಅವಳು ಅದನ್ನು ತನ್ನ ಬೆರಳುಗಳಿಂದ ಸವರಿ ಮುದ್ದಿಸಿದಳು. ಅವರಿಬ್ಬರೂ ಆ ದಿವಸವೆಲ್ಲಾ ಒಟ್ಟಿಗೆ ಇದ್ದರು. ಸಾಯಂಕಾಲದ ಹೊತ್ತಿಗೆ ಇತರರು ಹಿಂದಿರುಗಿ ಬಂದರು. ಸೂರ್ಯ ಮುಳುಗಿದ ಕೂಡಲೆ ಅವರು ತಮ್ಮ ಸ್ವಾಭಾವಿಕವಾದ ರೂಪಗಳನ್ನು ಹೊಂದಿದರು.

"ನಾಳೆಯ ದಿನ ನಾವು ಹಾರಿಹೋಗಿಬಿಡಬೇಕು. ಇನ್ನೊಂದು ವರ್ಷದವರೆಗೂ ಹಿಂದಿರುಗಿ ಬರುವ ಧೈರ್ಯ ನಮಗಿಲ್ಲ. ಆಧರೆ ನಾವು ನಿನ್ನನ್ನು ಹೀಗೆ ಬಿಟ್ಟು ಹೋಗಲಾರೆವು. ನಮ್ಮೊಡನೆ ಬರಲು ನಿನಗೆ ಸಾಕಾದಷ್ಟು ಧೈರ್ಯವಿದೆಯೆ? ನಿನ್ನನ್ನು ಕಾಡಿನ ಮೇಲೆ ಕೊಂಡೊಯ್ಯುವಷ್ಟು ಶಕ್ತಿ ನನ್ನ ತೋಳಿಗಿದೆ. ಆದ್ದರಿಂದ ನಮ್ಮೆಲ್ಲರ ಒಟ್ಟು ಶಕ್ತಿಯನ್ನೂ ಉಪಯೋಗಿಸಿದರೆ ನಿನ್ನನ್ನು ಸಾಗರದ ಮೇಲೆ ಕರೆದೊಯ್ಯಲು ಸಾಧ್ಯವಾಗುವುದು ಖಂಡಿತ" ಎಂದು ಹಿರಿಯವನು ಹೇಳಿದ.

ಸುಶೀಲೆ "ಓಹೋ! ನನ್ನನ್ನು ನಿಮ್ಮೊಡನೆ ಕರೆದುಕೊಂಡು ಹೋಗಿರಿ" ಎಂದಳು.

ಅವರು ರಾತ್ರಿಯೆಲ್ಲಾ ಒಂದು ಬಗೆಯ ಮೃದುವಾದ ಮರದ ತೊಗಟೆಯಿಂದ ಬಲೆಯನ್ನು ಹೆಣೆದರು. ಆ ಬಲೆ ದೊಡ್ಡದಾಗಿಯೂ ಮೃದುವಾಗಿಯೂ ಇತ್ತು. ಸುಶೀಲೆ ಅದರ ಮೇಲೆ ಮಲಗಿಕೊಂಡಳು. ಬೆಳಕು ಹರಿದು ಸೂರ್ಯ ಕಂಡಕೂಡಲೆ ಸಹೋದರರೆಲ್ಲರೂ ಮತ್ತೆ ಹಂಸಗಳಾಗಿ ತಮ್ಮ ಕೊಕ್ಕುಗಳಲ್ಲಿ ಬಲೆಯನ್ನು ಕಚ್ಚಿಕೊಂಡು ಮೇಲೇರಿ ಮೋಡಗಳ ನಡುವೆ ಹಾರಿಹೋದರು. ಅವರ ಪ್ರಾಣಪ್ರಿಯಳಾದ ಸೋದರಿ ಅದರಲ್ಲಿ ಮಲಗಿದ್ದಳು. ಸೂರ್ಯನ ಕಿರಣಗಳು ನೇರವಾಗಿ ಅವಳ ಮುಖದ ಮೇಲೆ ಬೀಳುತ್ತಿದ್ದವು. ಆದ್ದರಿಂದ ಒಂದು ಹಂಸ ತನ್ನ ಅಗಲವಾದ ರೆಕ್ಕೆಗಳಿಂದ ಅವಳಿಗೆ ನೆರಳನ್ನುಂಟುಮಾಡುತ್ತಾ ಅವಳ ತಲೆಯ ಮೇಲೆಯೇ ಹಾರಿತು.

ಸುಶೀಲೆಗೆ ಎಚ್ಚರವಾದಾಗ ಅವರು ನೆಲದಿಂದ ಬಹಳ ದೂರ ಹೋಗಿದ್ದರು. ಅವಳಿಗೆ ತಾನು ಇನ್ನೂ ಕನಸು ಕಾಣುತ್ತಿರುವಂತೆ ತೋರಿತು. ಸಮುದ್ರದ ಮೇಲೆ ಇಷ್ಟು ಎತ್ತರದಲ್ಲಿ ಹೋಗುತ್ತಿರುವುದು ಬಹಳ ವಿಚಿತ್ರವಾಗಿ ಕಂಡಿತು. ಅವಳ ಮಗ್ಗುಲಲ್ಲಿ ಸೊಗಸಾದ ಮಾಗಿದ ಹಣ್ಣುಗಳ ಒಂದು ಗೊಂಚಲೂ, ರುಚಿಕರವಾದ ಗಿಡಮೂಲಿಕೆಗಳ ಒಂದು ಗಂಟೂ ಬಿದ್ದಿತ್ತು. ಅವುಗಳನ್ನು ಅವಳ ಕಿರಿಯ ಅಣ್ಣ ಅವಳಿಗಾಗಿ ಸಂಗ್ರಹಿಸಿದ್ದ. ಇದಕ್ಕಾಗಿ ಅವಳು ಮನಸ್ಸಿನಲ್ಲೇ ಅವನನ್ನು ವಂದಿಸಿ, ಮುಗುಳುನಗೆ ನಕ್ಕಳು. ತನ್ನ ಮೇಲೆ ಹಾರಾಡುತ್ತಾ ತನ್ನ ಮುಖವನ್ನು ಬಿಸಿಲಿನಿಂದ ಮರೆಮಾಡುತ್ತಿದ್ದವನು ಅವನೇ ಎಂದು ಅವಳಿಗೆ ಗೊತ್ತಿತ್ತು. ಅವರು ಈಗ ಬಹಳ ಎತ್ತರದಲ್ಲಿದ್ದರು. ಅವರ ಕಣ್ಣಿಗೆ ಬಿದ್ದ ಮೊತ್ತಮೊದಲನೆಯ ಹಡಗು ನೀರಿನ ಮೇಲೆ ತೇಲುತ್ತಿದ್ದ ಸಣ್ಣ ಹಕ್ಕಿಯಂತೆ ಕಂಡಿತು ಅದರ ಹಿಂದುಗಡೆ ಒಂದು ದೊಡ್ಡ ಮೋಡ ಪರ್ವತದಂತೆ ಬಂತು. ಸುಶೀಲೆ ಅದರ ಮೇಲೆ ತನ್ನ ನೆರಳನ್ನು ಕಂಡಳು. ಹನ್ನೊಂದು ಹಕ್ಕಿಗಳ ನೆರಳೂ ಅಲ್ಲಿದ್ದವು. ಅವು ರಾಕ್ಷಸರಂತೆ ಕಾಣುತ್ತಿದ್ದವು. ಅವಳು ಹಿಂದೆ ನೋಡಿದ್ದ ಎಲ್ಲಾ ಚಿತ್ರಗಳಿಗಿಂತಲೂ ಅದು ಅತ್ಯಂತ ಸುಂದರವಾಗಿತ್ತು. ಆದರೆ ಸೂರ್ಯ ಮೇಲೇರಿದಂತೆಲ್ಲಾ ಮೋಡ ಹಿಂದೆ ಬಿತ್ತು. ಆ ನೆರಳಿನ ಚಿತ್ರವೂ ಮಾಯವಾಯಿತು.

ಗಾಳಿಯಲ್ಲಿ ರೊಯ್ಯನೆ ಹಾಯ್ದು ಹೋಗುವ ಬಾಣದಂತೆ ಅವರು ಮುಂದುಮುಂದಕ್ಕೆ ಹಾರಿಹೋದರು. ಆದರೆ ಅವರು ಮೊದಲಿಗಿಂತ ನಿಧಾನವಾಗಿ ಹಾರುತ್ತಿದ್ದರು. ಏಕೆಂದರೆ ಜೊತೆಯಲ್ಲಿ ತಮ್ಮ ತಂಗಿಯನ್ನು ಬೇರೆ ಹೊತ್ತುಕೊಂಡು ಹೋಗಬೇಕಾಗಿತ್ತು. ಅಷ್ಟರಲ್ಲಿ ಬಿರುಗಾಳಿಯೆದ್ದಿತು. ರಾತ್ರಿ ಸಮೀಪಿಸುತ್ತಿತ್ತು. ಸೂರ್ಯ ಮುಳುಗುತ್ತಿದ್ದುದನ್ನು ನೋಡಿ ಸುಶೀಲೆಯ ಹೃದಯ ಭಯದಿಂದ ತುಂಬಿಹೋಯಿತು. ಅವಳ ಅಣ್ಣಂದಿರು ಹೇಳಿದ್ದ ಒಂಟಿಯಾದ ಕಲ್ಲುಬಂಡೆ ಎಲ್ಲಿಯೂ ಕಾಣಲಿಲ್ಲ. ಹಂಸಗಳು ಎಂದಿಗಿಂತಲೂ ಹೆಚ್ಚು ಜೋರಿನಿಂದ ರೆಕ್ಕೆಗಳನ್ನು ಬಡಿಯುತ್ತಿದ್ದಂತೆ ತೋರಿತು. ಅಯ್ಯೋ! ಅವರು ಇನ್ನೂ ವೇಗವಾಗಿ ಹೋಗಲು ಆಗದೆ ಇದ್ದುದಕ್ಕೆ ಅವಳೇ ಕಾರಣಳಾಗಿದ್ದಳು. ಸೂರ್ಯ ಮುಳುಗಿದ ಕೂಡಲೆ

ಅವರು ಮನುಷ್ಯರೂಪಕ್ಕೆ ಬಂದುಬಿಡುವರು. ಆಗ ಅವರೆಲ್ಲರೂ ಸಮುದ್ರದೊಳಕ್ಕೆ ದೊಪ್ಪನೆ ಬಿದ್ದು ಮುಳುಗಿ ಹೋಗಿಬಿಡುವರು. ಅವಳು ತನ್ನ ಹೃದಯದ ಅಂತರಾಳದಿಂದ ದೇವರಿಗೆ ಮೊರೆಯಿಟ್ಟಳು. ಇಷ್ಟಾದರೂ ಬಂಡೆ ಕಾಣಲಿಲ್ಲ. ಕಪ್ಪನೆಯ ಮೋಡಗಳು ಆಕಾಶದಲ್ಲೆಲ್ಲಾ ಹರಡಿಕೊಂಡವು. ಬಲವಾದ ಗಾಳಿ ಬೀಸತೊಡಗಿತು. ಮೋಡಗಳೆಲ್ಲಾ ಭಯಂಕರವಾದ ಸೀಸದ ದೊಡ್ಡ ಅಲೆಗಳಂತೆ ಕಾಣುತ್ತಿದ್ದವು. ಮಿಂಚು ಬೇಗಬೇಗನೆ ಒಂದರ ಹಿಂದೆ ಒಂದರಂತೆ ನಾಲಗೆಗಳನ್ನು ಚಾಚುತ್ತಿತ್ತು.

ಇಷ್ಟು ಹೊತ್ತಿಗೆ ಸೂರ್ಯ ಸಮುದ್ರದ ಅಂಚಿಗೆ ಬಂದ! ಸುಶೀಲೆಯ ಎದೆ ನಡುಗಿತು. ಹಂಸಗಳೆಲ್ಲಾ ಒಮ್ಮಿಂದೊಮ್ಮೆಗೇ ಬಹಳ ವೇಗವಾಗಿ ಕೆಳಗಿಳಿಯುತ್ತಿದ್ದವು. ಅವು ನೀರಿಗೆ ಬಿದ್ದುಬಿಡುವುವೇನೋ ಎಂದು ಅವಳಿಗೆ ದಿಗಿಲಾಯಿತು. ಅಷ್ಟರಲ್ಲಿ ಅವು ಮತ್ತೆ ಹಾರಲು ಮೊದಲಿಟ್ಟವು. ಸೂರ್ಯನ ಅರ್ಧ ಭಾಗ ಆಗಲೇ ದಿಗಂತದ ಕೆಳಗೆ ಹೋಗಿತ್ತು. ಆಗ ಅವಳು ಕೆಳಗೆ ಒಂದು ಸಣ್ಣ ಬಂಡೆಯನ್ನು ಕಂಡಳು. ಅದು ನೀರಿನ ಮೇಲೆ ಒಂದು ಹಕ್ಕಿಯ ತಲೆಗಿಂತಲೂ ಹೆಚ್ಚು ದೊಡ್ಡದಾಗಿ ಕಾಣುತ್ತಿರಲಿಲ್ಲ. ಸೂರ್ಯ ಬಹಳ ಬೇಗ ಮುಳುಗಿದ. ಕೊನೆಗೆ ಅವನು ಕೇವಲ ಒಂದು ನಕ್ಷತ್ರದಷ್ಟು ಮಾತ್ರ ಕಾಣುತ್ತಿದ್ದ. ಆಗ ಅವಳ ಪಾದಗಳು ಗಟ್ಟಿಯಾದ ನೆಲವನ್ನು ಮುಟ್ಟಿದವು. ಕಟ್ಟಕಡೆಗೆ, ಸೂರ್ಯ ಉರಿಯುವ ಕಾಗದದ ಕೊನೆಯ ಕಿಡಿಯಂತೆ ಮಾಯವಾದ. ಅವಳು ಸುತ್ತಲೂ ಹೆಗಲ ಮೇಲೆ ಕೈಗಳನ್ನು ಹಾಕಿಕೊಂಡು ನಿಂತಿದ್ದ ಅಣ್ಣಂದಿರನ್ನು ಕಂಡಳು. ಆದರೆ ಅವರಿಗೆ ಅಲ್ಲಿ ನಿಲ್ಲಲು ಮಾತ್ರ ಸ್ಥಳವಿತ್ತು. ಅಲೆಗಳು ಬಂಡೆಗೆ ಬಡಿದು, ನೆನೆಸುವ ಮಳೆಯಂತೆ ಅದನ್ನು ನೀರಿನಿಂದ ತೊಳೆಯುತ್ತಿದ್ದವು. ಆಕಾಶ ಬಿಡುವಿಲ್ಲದ ಬೆಂಕಿಯ ಉರಿಗಳಿಂದ ಪ್ರಕಾಶಿಸುತ್ತಿತ್ತು. ಸಿಡಿಲು ಘರ್ಜನೆಯ ಮೇಲೆ ಘರ್ಜನೆಮಾಡುತ್ತಾ ಆರ್ಭಟಿಸಿತು. ಆದರೆ ಅಣ್ಣ-ತಂಗಿಯರು ಒಬ್ಬರೊಬ್ಬರ ಕೈಗಳನ್ನು ಹಿಡಿದು ನಿಂತು ದೇವರನ್ನು ಸ್ತೋತ್ರಮಾಡಿದರು. ಅದು ಅವರಿಗೆ ಸುಖವನ್ನೂ ಧೈರ್ಯವನ್ನೂ ಕೊಟ್ಟಿತು.

ಉಷಃಕಾಲದ ಹೊತ್ತಿಗೆ ಸಮುದ್ರದ ತಂಗಾಳಿ ನಿರ್ಮಲವಾಗಿಯೂ ಪ್ರಶಾಂತವಾಗಿಯೂ ಇತ್ತು. ಸೂರ್ಯೋದಯವಾದ ಒಡನೆಯೇ ಹಂಸಗಳು

ಸುಶೀಲೆಯೊಡನೆ ದ್ವೀಪದಂತೆ ಇದ್ದ ಈ ಕಿರುಬಂಡೆಯಿಂದ ಹಾರಿಹೋದವು. ಸಮುದ್ರ ಇನ್ನೂ ಉಕ್ಕುತ್ತಲೇ ಇತ್ತು. ಅವರು ಇದ್ದ ಸ್ಥಳದಿಂದ ಹಸುರು ಕಡಲಿನ ಮೇಲಿನ ಬಿಳಿಯ ನೀರ್ಗುಳ್ಳೆಗಳು ಅಲೆಗಳ ಮೇಲೆ ತೇಲುತ್ತಿದ್ದ ಲಕ್ಷೋಪಲಕ್ಷ ಹಂಸಗಳಂತೆ ಕಾಣುತ್ತಿದ್ದವು.

ಸೂರ್ಯ ಆಕಾಶದಲ್ಲಿ ಮೇಲೇರಿದಂತೆಲ್ಲಾ ಸುಶೀಲೆಯ ಎದುರಿಗೆ ಗಾಳಿಯಲ್ಲಿ ಅರ್ಧ ತೇಲುತ್ತಿದ್ದ ದೊಡ್ಡ ದೊಡ್ಡ ಹಿಮದ ಗಡ್ಡೆಗಳೂ, ಹರಿಯುವ ಮಂಜಿನ ಪ್ರವಾಹಗಳೂ ಕಾಣತೊಡಗಿದವು. ಅರ್ಧ ದಾರಿಯಲ್ಲಿ ಅರೆಗಾವುದ ಉದ್ದವಿದ್ದ ಒಂದು ಅರಮನೆ ಕಂಗೊಳಿಸಿತು ಅದರಲ್ಲಿ ಒಂದರ ಮೇಲೊಂದರಂತೆ ಉಪ್ಪರಿಗೆಗಳಿದ್ದವು. ಅವುಗಳ ಕೆಳಗೆ ತೆಂಗಿನ ಮರಗಳು ತಲೆದೂಗುತ್ತಿದ್ದವು; ಅತಿ ವಿಶಾಲವಾದ ಹೂಗಳು ಅರಳಿದ್ದವು. "ನಾವು ಹೋಗಿ ಸೇರುವ ದೇಶ ಅದೇ ಏನು?" ಎಂದು ಸುಶೀಲೆ ಕೇಳಿದಳು. ಹಂಸಗಳು "ಅಲ್ಲವೆಂದು" ತಲೆಯಲ್ಲಾಡಿಸಿದವು. ಅವಳು ನೋಡಿದ್ದುದು ನಿಜವಾದ ವಸ್ತುವಾಗಿರಲಿಲ್ಲ. ಅದೊಂದು ಬಿಸಿಲುಗುದುರೆಯಾಗಿತ್ತು. ಅದು ಮಾಟಗಾತಿಯೊಬ್ಬಳ ಸುಂದರವಾದ ಅರಮನೆ. ಅದರ ರೂಪ ಸದಾ ಬದಲಾಯಿಸುತ್ತಲೇ ಇರುತ್ತಿತ್ತು. ಯಾವ ಮನುಷ್ಯನಿಗೂ ಅದನ್ನು ಪ್ರವೇಶಿಸುವ ಧೈರ್ಯವಿರಲಿಲ್ಲ. ಸುಶೀಲೆ ಅದರ ಕಡೆಗೆ ದುರುಗುಟ್ಟಿ ನೋಡಿದಳು. ಅವಳು ನೋಡುತ್ತಿದ್ದಂತೆಯೆ, ಅರಮನೆಯೂ ತೋಟಗಳೂ ಬೆಟ್ಟಗಳೂ ಕರಗಿ ಹೋದವು. ಅವುಗಳು ಇದ್ದ ಸ್ಥಳದಲ್ಲಿ ಇಪ್ಪತ್ತು ದೇವಾಲಯಗಳು ತಮ್ಮ ಎತ್ತರವಾದ ಗೋಪುರಗಳನ್ನು ಹೆಮ್ಮೆಯಿಂದ ಎತ್ತಿ ತೋರಿಸುತ್ತಿದ್ದವು. ತಾನು ಗುಡಿಯ ಗಂಟೆಗಳ ಮಧುರವಾದ ನಾದವನ್ನು ಕೇಳುತ್ತಿದ್ದಂತೆ ಅವಳಿಗೆ ತೋರಿತು. ಆದರೆ ವಾಸ್ತವವಾಗಿ ಅವಳಿಗೆ ಕೇಳಿ ಬಂದುದು ಸಮುದ್ರದ ಘೋಷಣೆ. ಅವಳು ಆ ತೋರಿಕೆಯ ದೇವಾಲಯಗಳ ಹತ್ತಿರ ಹೋದಾಗ ಅವು ಅವಳ ಕೆಳಗೆ ತೇಲುತ್ತಿದ್ದ ದೊಡ್ಡ ಹಡಗುಗಳಾಗಿ ಬಿಟ್ಟಿದ್ದವು. ಕಡೆಗೆ ಆ ನೋಟವೂ ಮಾಯವಾಗಿ ನೀರಿನ ಮೇಲೆಲ್ಲಾ ಬರಿಯ ಮಂಜು ಕಂಡುಬಂದಿತು. ಹೀಗೆ ಅವಳು ತನ್ನ ಕಣ್ಣೆದುರು ಅನೇಕ ಬದಲಾವಣೆಗಳು ನಡೆಯುತ್ತಿದ್ದುದನ್ನು ಕಂಡಳು. ಹಾಗೆಯೇ ತಾನು ಹೋಗಬೇಕಾಗಿದ್ದ ನಿಜವಾದ ಭೂಮಿಯನ್ನೂ ಕಂಡಳು. ಸುಂದರವಾದ

ನೀಲಿಯ ಪರ್ವತಗಳು ಅವಳ ಎದುರಿಗೆ ಎದ್ದು ನಿಂತವು; ಅವುಗಳ ಮೇಲೆ ಎತ್ತರವಾದ ಮರಗಳೂ ಅರಮನೆಗಳೂ ಇದ್ದವು ಸೂರ್ಯ ಮುಳುಗುವುದಕ್ಕೆ ಎಷ್ಟೋ ಮುಂಚೆ ಅವಳು ಆ ಅರಣ್ಯಪ್ರದೇಶದಲ್ಲಿ ದೊಡ್ಡದೊಂದು ಗುಹೆಯ ಮುಂದೆ ಮೃದುವಾದ ಹಸುರು ಬಳ್ಳಿಗಳ ಮಧ್ಯೆ ಕುಳಿತಿದ್ದಳು. ಅದೆಲ್ಲಾ ಒಂದು ಸೊಗಸಾದ ಹೊಲಿಗೆಯ ಚಿತ್ರದಂತೆ ಕಾಣುತ್ತಿತ್ತು.

ಅವಳ ಕಿರಿಯ ಅಣ್ಣ ಅವಳಿಗೆ ಮಲಗುವ ಸ್ಥಳವನ್ನು ತೋರಿಸಿ "ನಿನಗೆ ಈ ದಿನ ರಾತ್ರಿ ಇಲ್ಲಿ ಯಾವ ಕನಸು ಬೀಳುವುದೋ ನೋಡೋಣ" ಎಂದ.

ಅವಳು "ನಾನು ನಿಮ್ಮನ್ನು ಬಿಡುಗಡೆ ಮಾಡುವ ರೀತಿ ಹೇಗೆಂಬ ಕನಸನ್ನು ಕಂಡರೆ ಅಷ್ಟೇ ಸಾಕು" ಎಂದಳು. ಅವಳ ಮನಸ್ಸೆಲ್ಲವೂ ಈ ಆಲೋಚನೆಯಿಂದಲೇ ತುಂಬಿಹೋಯಿತು. ಅವಳು ದೇವರ ಸಹಾಯವನ್ನು ಅಂಗಲಾಚಿ ಬೇಡಿದಳು. ನಿದ್ರೆಯಲ್ಲಿಯೂ ಪ್ರಾರ್ಥನೆಮಾಡದೆ ಬಿಡಲಿಲ್ಲ. ತಾನು ಹಿಂದೆ ಅಂತರಿಕ್ಷದಲ್ಲಿ ನೋಡಿದ್ದ ಮಾಟಗಾತಿಯ ಅರಮನೆಗೆ ಹೋಗುತ್ತಿದ್ದಂತೆ ತೋರಿತು. ಆ ಮಾಟಗಾತಿ ಅವಳ ಬಳಿಗೆ ಬಂದಳು. ಅವಳು ಸುಂದರಳಾಗಿಯೂ ಆಕರ್ಷಕಳಾಗಿಯೂ ತೇಜಸ್ಸಿನಿಂದ ತುಂಬಿದವಳಾಗಿಯೂ ಇದ್ದಳು. ಆದರೆ ಅವಳು ಹಿಂದೆ ಸುಶೀಲೆಗೆ ಕಾಡಿನಲ್ಲಿ ತಿನ್ನಲು ಹಣ್ಣುಗಳನ್ನು ಕೊಟ್ಟು, ಚಿನ್ನದ ಕಿರೀಟಗಳುಳ್ಳ ಹಂಸಗಳ ವಿಚಾರವನ್ನು ಅವಳಿಗೆ ತಿಳಿಸಿದ್ದ ಮುದಿ ಹೆಂಗಸನ್ನು ಬಹಳವಾಗಿ ಹೋಲುವಂತೆ ಕಂಡುಬಂದಳು.

ಅವಳು "ನಿನ್ನ ಅಣ್ಣಂದಿರು ಬಿಡುಗಡೆ ಹೊಂದಬಹುದು. ಆದರೆ ಆ ಕೆಲಸಕ್ಕೆ ಬೇಕಾಗುವ ಧೈರ್ಯವೂ ತಾಳ್ಮೆಯೂ ನಿನಗೆ ಇದೆಯೆ? ಸಮುದ್ರ ನಿನ್ನ ಕೈಗಳಿಗಿಂತಲೂ ಹೆಚ್ಚು ಮೃದುವಾಗಿರುವುದು ನಿಜ. ಅದು ಎಂತಹ ಗಟ್ಟಿಯಾದ ಕಲ್ಲನ್ನಾದರೂ ನುಣುಪಾಗಿ ಮಾಡಬಲ್ಲದು. ಆದರೆ ನಿನ್ನ ಬೆರಳುಗಳು ಅನುಭವಿಸುವ ನೋವನ್ನು ಅದು ಅನುಭವಿಸುವುದಿಲ್ಲ. ಅದಕ್ಕೆ ಹೃದಯವಿಲ್ಲ. ಅದಕ್ಕೆ ನಿನ್ನಂತೆ ನೋವುಂಟಾಗುವುದಿಲ್ಲ. ನನ್ನ ಕೈಯಲ್ಲಿರುವ ಈ ಚುಚ್ಚುವ ಮುಳ್ಳುಕಂಥೆ ನಿನಗೆ ಕಾಣುತ್ತದೆಯೆ? ನೀನು ಮಲಗುವ ಗುಹೆಯ ಸುತ್ತಲೂ ಇಂತಹ ಗಿಡಗಳು ಎಷ್ಟೋ ಬೆಳೆಯುತ್ತವೆ. ಇವನ್ನೂ ದೇವಾಲಯಗಳ ಆವರಣದಲ್ಲಿ ಬೆಳೆಯುವ ಗಿಡಗಳನ್ನೂ ಮಾತ್ರ

ಉಪಯೋಗಿಸಬಹುದು. ಇದನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊ! ಅವು ನಿನ್ನ ಕೈಗಳನ್ನು ಚುಚ್ಚಿ ಗಾಯಪಡಿಸಿ ಬೊಬ್ಬೆಯೆಬ್ಬಿಸುತ್ತವೆ. ಆದರೂ ನೀನು ಅವನ್ನು ಕೀಳಬೇಕು. ಆ ಮುಳ್ಳುಗಳನ್ನು ನಿನ್ನ ಪಾದಗಳಿಂದ ಚೆನ್ನಾಗಿ ತುಳಿದರೆ ಅದರಿಂದ ನಿನಗೆ ನಾರು ಸಿಕ್ಕುತ್ತದೆ. ಆ ನಾರನ್ನು ಉಪಯೋಗಿಸಿ ನೀನು ಉದ್ದವಾದ ತೋಳುಗಳುಳ್ಳ ಹನ್ನೊಂದು ನಿಲುವಂಗಿಗಳನ್ನು ಹೆಣೆಯಬೇಕು. ಈ ಅಂಗಿಗಳನ್ನು ಹನ್ನೊಂದು ಹಂಸಗಳ ಮೇಲೂ ಎಸೆದರೆ ಅವುಗಳ ಮೇಲಿರುವ ಮಾಟ ಕಳೆದುಹೋಗುತ್ತದೆ. ಆದರೆ ನೀನು ಈ ಕೆಲಸವನ್ನು ಆರಂಭಿಸುವ ಕ್ಷಣದಿಂದ ಅದು ಪೂರ್ತಿಯಾಗಿ ಮುಗಿಯುವವರೆಗೂ, ಎಷ್ಟೇ ವರ್ಷಗಳಾಗಲಿ, ಒಂದು ಮಾತನ್ನೂ ಆಡಕೂಡದು. ಇದನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊ! ನೀನು ಆಡುವ ಒಂದೊಂದು ಮಾತೂ ನಿನ್ನ ಅಣ್ಣಂದಿರ ಹೃದಯಕ್ಕೆ ಶೂಲಪ್ರಾಯವಾಗುವುದು. ಅವರ ಜೀವಗಳು ನಿನ್ನ ನಾಲಗೆಯನ್ನು ಅವಲಂಬಿಸಿವೆ” ಎಂದು ಹೇಳಿದಳು.

ಹೀಗೆ ಹೇಳುತ್ತಿರುವಂತೆಯೇ ಅವಳು ಸುಶೀಲೆಯ ಕೈಯನ್ನು ಮುಟ್ಟಿದಳು. ಅವಳ ಸೋಂಕು ಉರಿಯುವ ಬೆಂಕಿಯಂತಿತ್ತು. ಸುಶೀಲೆಗೆ ಎಚ್ಚರಿಕೆಯಾಯಿತು. ಹಗಲಿನ ಬೆಳಕು ಹೊಳೆಯುತ್ತಿತ್ತು. ಅವಳು ಮಲಗಿದ್ದ ಸ್ಥಳದ ಬಳಿಯೇ ಅವಳು ಕನಸಿನಲ್ಲಿ ಕಂಡಿದ್ದಂತಹ ಒಂದು ಮುಳ್ಳುಕಂಥೆ ಬಿದ್ದಿತ್ತು. ಅವಳು ಕೃತಜ್ಞತೆಯಿಂದ ಮೊಣಕಾಲೂರಿ ಕೈ ಮುಗಿದು ದೇವರನ್ನು ವಂದಿಸಿ, ತನ್ನ ಕೆಲಸವನ್ನು ಆರಂಭಿಸಲು ಗುಹೆಯನ್ನು ಬಿಟ್ಟು ಹೊರಟಳು.

ಸುಶೀಲೆ ಆ ಭಯಂಕರವಾದ ಮುಳ್ಳು ಕಂಥೆಗಳನ್ನು ತನ್ನ ಮೃದುವಾದ ಕೈಗಳಿಂದ ಕಿತ್ತಳು. ಅವು ಬೆಂಕಿಯ ತೆರದಲ್ಲಿ ಸುಡುತ್ತಿದ್ದವು. ಅವಳ ಕೈ ಮೇಲೂ ತೋಳಿನ ಮೇಲೂ ದೊಡ್ಡ ದೊಡ್ಡ ಬೊಬ್ಬೆಗಳೆದ್ದವು. ಆದರೆ ತನ್ನ ಪ್ರೀತಿಪಾತ್ರರಾದ ಅಣ್ಣಂದಿರ ಬಿಡುಗಡೆಯಾಗಬೇಕಾಗಿದ್ದುದರಿಂದ ಅವಳು ಅದೆಲ್ಲಕ್ಕೂ ಸ್ವಲ್ಪವೂ ಅಳುಕದೆ ಅನುಭವಿಸಿದಳು. ಪ್ರತಿಯೊಂದು ಮುಳ್ಳುಪೊದೆಯನ್ನೂ ತನ್ನ ಬರಿಯ ಕಾಲಿನಿಂದ ತುಳಿದು ಅದರಿಂದ ನಾರನ್ನು ತೆಗೆದು ಹೊಸೆದಳು.

ಸೂರ್ಯ ಮುಳುಗಿದಾಗ ಅವಳ ಅಣ್ಣಂದಿರು ಹಿಂದಿರುಗಿದರು. ಅವಳು ಮೌನವಾಗಿದ್ದುದನ್ನು ಕಂಡು ಅವರಿಗೆ ಗಾಬರಿಯಾಯಿತು. ಅವರು ಅದು ತಮ್ಮ ಕೆಡುಕಿಯಾದ ಮಲತಾಯಿಯ ಮಂತ್ರದ ಮತ್ತೊಂದು ಫಲವೆಂದು ಎಣಿಸಿದರು. ಆದರೆ ಅವಳ ಕೈಗಳನ್ನು ನೋಡಿದಾಗ ಅವಳು ಹಾಗಿದ್ದುದು ತಮಗೋಸ್ಕರವೆಂದು ಅವರಿಗೆ ಗೊತ್ತಾಯಿತು. ಅದರಲ್ಲಿ ಕಿರಿಯವನು ಅತ್ತನು. ಅವನ ಕಣ್ಣೀರು ಬಿದ್ದ ಕಡೆಯಲ್ಲೆಲ್ಲಾ ಅವಳ ನೋವು ಹೋಗಿ ಬಿಟ್ಟಿತು. ಬೊಬ್ಬೆಗಳು ಮಾಯುವಾದವು.

ಅವಳು ರಾತ್ರಿಯೆಲ್ಲಾ ಕೆಲಸಮಾಡಿದಳು. ತನ್ನ ಅಣ್ಣಂದಿರನ್ನು ಬಿಡುಗಡೆ ಮಾಡಿದ ಹೊರತು ಅವಳು ವಿಶ್ರಾಂತಿಯನ್ನು ಹೊಂದುವಂತೆ ಇರಲಿಲ್ಲ ಮಾರನೆಯ ದಿನ ಅವಳ ಅಣ್ಣಂದಿರು ಹಕ್ಕಿಗಳಾಗಿ ಹಾರಿ ಹೋಗಿದ್ದಾಗ ಅವಳೊಬ್ಬಳೇ ಹೊರಗಡೆ ಕುಳಿತು ಕೆಲಸಮಾಡಿದಳು. ಕಾಲ ಇಷ್ಟು ವೇಗವಾಗಿ ಯಾವಾಗಲೂ ಓಡಿರಲಿಲ್ಲ ಒಂದು ನಿಲುವಂಗಿ ಮುಗಿಯಿತು. ಅವಳು ಇನ್ನೊಂದನ್ನು ಆರಂಭಿಸಿದಳು. ಅಷ್ಟು ಹೊತ್ತಿಗೆ ಕಾಡಿನಲ್ಲಿ ಬೇಟೆಗಾರರ ಕೊಂಬಿನ ಕೂಗು ಕೇಳಿಬಂತು. ಅವಳಿಗೆ ಬಹಳ ಭಯವಾಯಿತು. ಶಬ್ದ ಹತ್ತಿರ ಹತ್ತಿರ ಬಂದಿತು. ನಾಯಿಗಳು ಬೊಗಳುವುದು ಕೇಳಿಸಿತು. ಹೆದರಿಕೆಯಿಂದ ಗುಹೆಯ ಒಳಕ್ಕೆ ಓಡಿಹೋಗಿ, ತಾನು ಕೂಡಿ ಹಾಕಿದ್ದ ಮುಳ್ಳು ಕಂತೆಗಳನ್ನೂ ನಾರನ್ನೂ ಗಂಟುಕಟ್ಟಿ ಆ ಗಂಟಿನ ಮೇಲೆ ಕುಳಿತುಕೊಂಡಳು.

ಆ ಸಮಯಕ್ಕೆ ಸರಿಯಾಗಿ ಒಂದು ದೊಡ್ಡ ನಾಯಿ ಪೊದೆಯಿಂದ ಮುಂದಕ್ಕೆ ಹಾರಿತು. ಅದರ ಹಿಂದೆ ಇನ್ನೊಂದು, ಅದರ ಹಿಂದೆ ಮತ್ತೊಂದು ಹೀಗೆ ಹಾರಿದವು. ಅವೆಲ್ಲಾ ಗಟ್ಟಿಯಾಗಿ ಬೊಗಳಿ ಹಿಂದಕ್ಕೂ ಮುಂದಕ್ಕೂ ನೆಗೆದಾಡಿದವು. ಕೆಲವು ನಿಮಿಷಗಳಲ್ಲೇ ಬೇಟೆಗಾರರು ಗುಹೆಯ ಹೊರಗಡೆ ಬಂದು ನಿಂತರು. ಅವರಲ್ಲಿ ಅತ್ಯಂತ ಸುಂದರನಾಗಿದ್ದವನೇ ಆ ದೇಶದ ದೊರೆ. ಅವನು ಸುಶೀಲೆಯಿದ್ದ ಕಡೆಗೆ ನಡೆದು ಬಂದ. ಅವನು ಅವಳಂತಹ ಚೆಲುವೆಯಾದ ಹುಡುಗಿಯನ್ನು ಹಿಂದೆ ಎಂದೂ ಎಲ್ಲಿಯೂ ನೋಡಿರಲಿಲ್ಲ.

ಅವನು " ಮಗು, ನೀನು ಇಲ್ಲಿಗೆ ಹೇಗೆ ಬಂದೆ ? " ಎಂದು ಕೇಳಿದ.

ಸುಶೀಲೆ ತಲೆಯಲ್ಲಾಡಿಸಿದಳು. ಅವಳಿಗೆ ಮಾತಾಡಲು ಧೈರ್ಯವಿರಲಿಲ್ಲ. ಅವಳ ಅಣ್ಣಂದಿರ ಬಿಡುಗಡೆಯೂ ಜೀವಗಳೂ ಅವಳ ಮೌನವನ್ನು ಅವಲಂಬಿಸಿದ್ದವು ತಾನು ಅನುಭವಿಸುತ್ತಿದ್ದ ಯಾತನೆಯೂ ನೋವೂ ರಾಜನಿಗೆ ಗೊತ್ತಾಗದಿರಲೆಂದು ಅವಳು ತನ್ನ ಕೈಗಳನ್ನು ಸೀರೆಯ ಸೆರಗಿನೊಳಗೆ ಹುದುಗಿಸಿಕೊಂಡಳು.

ರಾಜ “ನನ್ನೊಡನೆ ಬಾ. ನೀನು ಇಲ್ಲಿ ಇರಬಾರದು. ನೀನು ಚೆಲುವೆಯಾಗಿರುವಂತೆಯೇ ನಿನ್ನ ಗುಣವೂ ಒಳ್ಳೆಯದಾಗಿದ್ದರೆ ನಾನು ನಿನಗೆ ರೇಷ್ಮೆಯ ಬಟ್ಟೆಗಳನ್ನು ಉಡಿಸಿ, ನಿನ್ನ ತಲೆಯ ಮೇಲೆ ಚಿನ್ನದ ಕಿರೀಟವನ್ನಿಡುವೆನು. ನೀನು ನನ್ನೊಡನೆ ವಾಸಮಾಡಬಹುದು. ನನ್ನ ಅರಮನೆಯು ತುಂಬ ಐಶ್ವರ್ಯವಿದೆ. ಅದೆಲ್ಲಾ ನಿನಗೆ ದೊರೆಯುವಂತೆ ಮಾಡುತ್ತೇನೆ” ಎಂದು ಹೇಳಿದ. ಅನಂತರ ಅವನು ಅವಳನ್ನು ಎತ್ತಿ ತನ್ನ ಕುದುರೆಯ ಮೇಲೆ ಕೂಡಿಸಿಕೊಂಡ. ಅವಳು ಅತ್ತು ಕರೆದು ಗೋಳಾಡಿದಳು. ಆದರೆ ದೊರೆ “ನಾನು ನಿನ್ನ ಸುಖಕ್ಕೋಸ್ಕರವೇ ಹೀಗೆ ಮಾಡುತ್ತಿದ್ದೇನೆ. ನಾನು ಈಗ ಮಾಡುತ್ತಿರುವ ಕೆಲಸಕ್ಕಾಗಿ ನೀನೇ ಕೊನೆಗೆ ಕೃತಜ್ಞಳಾಗಿರುವೆ!” ಎಂದು ಹೇಳಿ, ಪರ್ವತಗಳ ಮೇಲೆಲ್ಲಾ ನಾಗಾಲೋಟದಿಂದ ಹಾರಿಹೋದ. ಅವಳನ್ನು ಅವನು ತನ್ನ ಜೊತೆಯಲ್ಲೇ ಕುದುರೆಯ ಮೇಲೆ ಕೂಡಿಸಿಕೊಂಡಿದ್ದ. ಬೇಟೆಗಾರರು ಹಿಂದೆ ಹೋದರು.

ಸೂರ್ಯಾಸ್ತದ ವೇಳೆಗೆ ರಾಜಧಾನಿಯ ಗುಡಿಗೋಪುರಗಳು ಅವರ ಎದುರು ಎಸೆದವು. ರಾಜನು ಅವಳನ್ನು ಅರಮನೆಯೊಳಕ್ಕೆ ಕರೆದೊಯ್ದ. ಅಲ್ಲಿ ಅಮೃತಶಿಲೆಯ ಸಭಾಮಂಟಪಗಳಲ್ಲಿ ಪನ್ನೀರ ಕಾರಂಜಿಗಳು ಆಟವಾಡುತ್ತಿದ್ದವು. ಗೋಡೆಗಳೂ ಮೇಲ್ಛಾವಣಿಗಳೂ ಚಿತ್ರಗಳಿಂದ ಅಲಂಕೃತವಾಗಿದ್ದವು. ಆದರೆ ಅವೆಲ್ಲಾ ಅವಳ ಕಣ್ಣಿಗೆ ಬೀಳಲಿಲ್ಲ. ಅವಳು ಸುಮ್ಮನೆ ಅತ್ತು ಅತ್ತು ದುಃಖಪಡುತ್ತಿದ್ದಳು. ಊಳಿಗದ ಹೆಂಗಸರು ಅವಳನ್ನು ರಾಜಾರ್ಹವಾದ ಉಡುಗೆತೊಡಿಗೆಗಳಿಂದ ಸಿಂಗರಿಸಿದರು. ಆಗಲೂ ಅವಳು ಸ್ವಲ್ಪವೂ ಮಾತಾಡಲಿಲ್ಲ, ಅಲುಗಾಡಲಿಲ್ಲ, ವಿರೋಧಿಸಲಿಲ್ಲ. ಅವರು ಅವಳ ಜಡೆಗಳಲ್ಲಿ ಮುತ್ತುರತ್ನಗಳನ್ನು ಪೋಣಿಸಿದರು. ಗಾಯಗೊಂಡು ಬೊಬ್ಬೆಯೆದ್ದಿದ್ದ ಅವಳ ಕೈಗಳಿಗೆ ರೇಷ್ಮೆಯ ಕೈಚೀಲಗಳನ್ನು ತೊಡಿಸಿದರು.

ಸಕಲಾಭರಣಗಳಿಂದ ಅಲಂಕೃತಳಾಗಿ ಅಲ್ಲಿ ನಿಂತಿದ್ದಾಗ ಅವಳು ಪ್ರಕಾಶಮಯಳಾಗಿಯೂ ಮನೋಹರಳಾಗಿಯೂ ಇದ್ದಳು. ಆಸ್ಥಾನಿಕರೆಲ್ಲಾ ಅವಳ ಮುಂದೆ ಗೌರವದಿಂದ ತಲೆಬಾಗಿದರು. ರಾಜ ಅವಳನ್ನು ತನ್ನ ರಾಣಿಯಂತೆಯೇ ಪ್ರೀತಿಸಿದ. ರಾಜನ ಪುರೋಹಿತ ಮಾತ್ರ ತಲೆಯಲ್ಲಾಡಿಸಿದ. ಅವಳು ತಮ್ಮ ಕಣ್ಣುಗಳನ್ನೆಲ್ಲಾ ಬೆರಗುಗೊಳಿಸಿ, ದೊರೆಗೆ ಪ್ರೇಮದ ಹುಚ್ಚು ಹಿಡಿಸಿದ್ದ ಒಬ್ಬ ಮಾಟಗಾತಿಯೆಂದು ಅವನು ಅಲ್ಲಲ್ಲಿ ಪಿಸುಮಾತಿನಲ್ಲಿ ಹೇಳಿದ.

ದೊರೆ ಮಾತ್ರ ಪುರೋಹಿತನ ಮಾತನ್ನು ಕೇಳಲಿಲ್ಲ. ಅವಳಿಗಾಗಿ ಸುಮಧುರವಾದ ಸಂಗೀತವನ್ನು ಏರ್ಪಡಿಸಿದ, ಬಹಳ ಬೆಲೆಬಾಳುವ ರುಚಿಕರವಾದ ಆಹಾರಪದಾರ್ಥಗಳನ್ನು ಒದಗಿಸಿದ, ಅತ್ಯಂತ ಸುಂದರಿಯರಾದ ಹುಡುಗಿಯರು ಅವಳ ಎದುರಿಗೆ ನರ್ತನ ಮಾಡಬೇಕೆಂದು ಆಜ್ಞಾಪಿಸಿದ. ರಾಜನೂ ಸೇವಕರೂ ಅವಳನ್ನು ರಾಜಮಂದಿರದ ಭವ್ಯವಾದ ಕೊಠಡಿಗಳಿಗೆ ಕರೆದೊಯ್ದರು. ಸುತ್ತಲೂ ಕಣ್ಣು ಸೆಳೆಯುವ ಹೂದೋಟಗಳಿದ್ದವು. ಹೂಗಳ ಸುವಾಸನೆ ಎಲ್ಲೆಲ್ಲೂ ವ್ಯಾಪಿಸಿತ್ತು. ಅವರು ಅವುಗಳ ನಡುವೆ ನಡೆದುಹೋದರು. ಇಷ್ಟಾದರೂ ಅವಳ ತುಟಿಗಳಲ್ಲಾಗಲಿ ಕಣ್ಣುಗಳಲ್ಲಾಗಲಿ ಒಂದು ಮುಗುಳ್ನಗೆಯ ಕುರುಹೂ ಕಂಡುಬರಲಿಲ್ಲ. ವ್ಯಸನ ಅಲ್ಲಿ ಮನೆಮಾಡಿಕೊಂಡಂತಿತ್ತು. ಕಡೆಗೆ ರಾಜ ಅವಳು ಮಲಗಬೇಕಾಗಿದ್ದ ಒಂದು ಸಣ್ಣ ಕೋಣೆಯ ಬಾಗಿಲನ್ನು ತೆರೆದ. ಅದರೊಳಗೆ ಅಮೂಲ್ಯವಾದ ರತ್ನಗಂಬಳಿಯನ್ನು ಹಾಸಿದ್ದರು. ರಾಜ ಅವಳನ್ನು ಕಾಡಿನಲ್ಲಿ ಕಂಡಾಗ ಅವಳು ಕುಳಿತಿದ್ದ ಗುಹೆಯನ್ನು ಆದಷ್ಟುಮಟ್ಟಿಗೆ ಹೋಲುವಂತೆ ಆ ಕೋಣೆ ನಿರ್ಮಿತವಾಗಿತ್ತು. ಅವಳು ಮುಳ್ಳಿನಿಂದ ತೆಗೆದು ಹೊಸೆದಿದ್ದ ನಾರಿನ ಗಂಟು ನೆಲದ ಮೇಲಿತ್ತು. ಅವಳು ಆಗಲೇ ಹೆಣೆದು ಮುಗಿಸಿದ್ದ ನಿಲುವಂಗಿ ಮೇಲ್ಛಾವಣಿಯಿಂದ ನೇತಾಡುತ್ತಿತ್ತು. ಬೇಟೆಗಾರರಲ್ಲಿ ಒಬ್ಬನು ಇವೆಲ್ಲವನ್ನೂ ಏನೋ ವಿಚಿತ್ರ ವಸ್ತುಗಳೆಂದು ಸ್ನೇಹಿತರಿಗೆ ತೋರಿಸುವುದಕ್ಕೆ ತಂದಿದ್ದ.

ರಾಜ ಸುಶೀಲೆಯನ್ನು ನೋಡಿ “ಇಲ್ಲಿ ನೀನು ನಿನ್ನ ಮೊದಲಿನ ಮನೆಯಲ್ಲಿ ಇದ್ದಂತೆಯೇ ಇರಬಹುದು. ಬೇಕಾದ ಹಾಗೆ ಕಣಸು ಕಾಣಬಹುದು. ಇದೋ, ನೀನು ಮಾಡುತ್ತಿದ್ದ ಕೆಲಸ ಇಲ್ಲಿದೆ. ಇಲ್ಲಿನ ಸೌಖ್ಯದ ಮಧ್ಯೆ ನಿನ್ನ ಹಿಂದಿನ ದಿನಗಳನ್ನು ನೆನೆದರೆ ನಿನಗೇ ನಗೆಬರಬಹುದು” ಎಂದ.

ತನ್ನ ಅಚ್ಚುಮೆಚ್ಚಿನ ಈ ವಸ್ತುಗಳನ್ನೆಲ್ಲಾ ನೋಡಿದಾಗ ಸುಶೀಲೆಯ ತುಟಿಗಳ ಮೇಲೆ ಒಂದು ಕಿರುನಗೆ ಕಾಣಿಸಿಕೊಂಡಿತು. ಅವಳ ಕೆನ್ನೆಗಳು ಕೆಂಪೇರಿದವು. ಅವಳು ತನ್ನ ಅಣ್ಣಂದಿರ ಬಿಡುಗಡೆಯನ್ನು ನೆನೆದು ರಾಜನ ಕೈಗಳಿಗೆ ಮುತ್ತುಕೊಟ್ಟಳು. ಅವನು ಅವಳನ್ನು ತನ್ನ ಎದೆಗೆ ಅಪ್ಪಿಕೊಂಡ. ದೇವಾಲಯಗಳ ಗಂಟೆಗಳೆಲ್ಲಾ ರಾಜನ ಮದುವೆಯ ಗೌರವಾರ್ಥವಾಗಿ ನಾದ ಮಾಡಬೇಕೆಂದು ಆಜ್ಞಾಪಿಸಿದ. ಕಾಡಿನಿಂದ ಬಂದಿದ್ದ ಸುಂದರಿಯಾದ ಮೂಕ ಹುಡುಗಿ ನಾಡಿನ ರಾಣಿಯಾಗಬೇಕಾಗಿತ್ತು.

ಪುರೋಹಿತ ರಾಜನ ಕಿವಿಯಲ್ಲಿ ಏನೇನೋ ಕೆಟ್ಟ ಚಾಡಿಯ ಮಾತುಗಳನ್ನೆಲ್ಲಾ ಉಸುರಿದ. ಆದರೆ ಅವು ರಾಜನ ಎದೆಗೆ ಇಳಿಯಲಿಲ್ಲ. ಮದುವೆ ನಡೆಯಲೇಬೇಕಾಗಿತ್ತು. ರಾಜಪುರೋಹಿತನೇ ಅವಳ ತಲೆಯಮೇಲೆ ಕಿರೀಟವನ್ನು ಇಡಬೇಕಾಗಿತ್ತು. ಪುರೋಹಿತನಿಗೆ ಒಳಗೊಳಗೇ ಸಿಟ್ಟು ಕುದಿಯುತ್ತಿತ್ತು. ಅವನು ಕೋಪದಿಂದ ಕಿರೀಟವನ್ನು ಅವಳ ತಲೆಯ ಮೇಲೆ ಬಹಳ ಬಲವಾಗಿ ಅದುಮಿದ. ಅವಳಿಗೆ ನೋವುಂಟಾಯಿತು. ಆದರೆ ಅದಕ್ಕಿಂತಲೂ ಹೆಚ್ಚು ನೋವನ್ನು ಹುಟ್ಟಿಸುವ ಒಂದು ವಸ್ತು ಅವಳ ಹೃದಯವನ್ನು ಚುಚ್ಚುತ್ತಿತ್ತು. ತನ್ನ ಅಣ್ಣಂದಿರಿಗಾಗಿ ಅವಳು ಪಡುತ್ತಿದ್ದ ಮನೋವ್ಯಥೆಗೆ ಹೋಲಿಸಿದರೆ ಈಗಿನ ಶರೀರದ ನೋವು ಇಲ್ಲವೆಂದೇ ತೋರುತ್ತಿತ್ತು. ಅವಳು ಬಾಯಿಗೆ ಬೀಗ ಹಾಕಿಕೊಂಡಿದ್ದಳು. ತಾನು ಆಡುವ ಒಂದು ಮಾತಾದರೂ ಅವಳ ಅಣ್ಣಂದಿರಿಗೆ ಮೃತ್ಯುಪ್ರಾಯವಾಗಿಬಿಡುತ್ತಿತ್ತು. ಆದರೆ ಅವಳ ಕಣ್ಣು ತುಂಬ ಪ್ರೇಮ ತುಳುಕುತ್ತಿತ್ತು. ರಾಜನೂ ಅವಳನ್ನು ಮೆಚ್ಚಿಸಲು ಏನು ಬೇಕಾದರೂ ಮಾಡಲು ಸಿದ್ಧವಾಗಿದ್ದ. ದಿನದಿನಕ್ಕೂ ಅವಳಿಗೆ ಅವನಲ್ಲಿದ್ದ ಪ್ರೀತಿ ಬೆಳೆಯಿತು. ತನ್ನ ಕಷ್ಟಗಳನ್ನೆಲ್ಲಾ ಅವನಲ್ಲಿ ಹೇಳಿಕೊಳ್ಳಬೇಕೆಂದು ಅವಳಿಗೆ ಆಸೆಯಾಯಿತು. ಆದರೆ ಅವಳು ಮೂಕಳಾಗಿರುವುದು ಅತ್ಯಗತ್ಯವಾಗಿತ್ತು. ಅವಳು ಮೌನದಿಂದ ತನ್ನ ಕೆಲಸವನ್ನು ಪೂರೈಸಬೇಕಾಗಿತ್ತು. ಆದ್ದರಿಂದ ಪ್ರತಿ ರಾತ್ರಿಯೂ ಅವಳು ಅವನ ಮಗ್ಗುಲಿನಿಂದ ಕದ್ದುಹೋಗಿ, ಗುಹೆಯಂತೆ ಅಲಂಕೃತವಾಗಿದ್ದ ತನ್ನ ಕೊಠಡಿಯಲ್ಲಿ ಕುಳಿತು ಕೆಲಸಮಾಡುತ್ತಿದ್ದಳು. ಒಂದಾದಮೇಲೊಂದರಂತೆ ನಿಲುವಂಗಿಗಳನ್ನು ಹೆಣೆದಳು. ಏಳನೆಯ ಅಂಗಿಗೆ ಬರುವಹೊತ್ತಿಗೆ ಅವಳು ತಂದಿದ್ದ ನಾರೆಲ್ಲಾ ಮುಗಿದುಹೋಗಿತ್ತು.

ತಾನು ಉಪಯೋಗಿಸಬೇಕಾಗಿದ್ದ ಮುಳ್ಳುಪೊದೆಗಳು ಊರ ಹೊರಗಿನ ಗುಡಿಯ ಹಿಂಭಾಗದಲ್ಲಿ ಬೆಳೆಯುತ್ತಿದ್ದವೆಂದು ಅವಳಿಗೆ ಗೊತ್ತಿತ್ತು. ಆದರೆ ಅವನ್ನು ಅವಳಿಗೆ ತಂದುಕೊಡುವವರು ಯಾರು? ಅವಳು ಅಲ್ಲಿಗೆ ಹೋಗುವು ದಾದರೂ ಹೇಗೆ? ಕೊನೆಗೆ ಅವಳು "ನನ್ನ ಹೃದಯದ ಕಡುತರವಾದ ನೋವಿಗೆ ಹೋಲಿಸಿದರೆ ಬೆರಳುಗಳ ನೋವು ಏನು ಘನವಾದುದು? ನಾನು ಧೈರ್ಯಮಾಡಿ ಹೊರಗೆ ಹೋಗಲೇಬೇಕು. ದಯಾಮಯನಾದ ದೇವರು ನನ್ನ ಕೈಬಿಡುವುದಿಲ್ಲ" ಎಂದು ಯೋಚಿಸಿದಳು.

ತಾನು ಕೆಟ್ಟ ಕೆಲಸವನ್ನು ಮಾಡುತ್ತಿದ್ದಳೋ ಎನ್ನುವಷ್ಟು ಹೆದರಿಕೆ ಯಿಂದ ಅವಳು ಒಂದು ದಿನ ರಾತ್ರಿ ಕದ್ದು ಹೊರಟು ಊರ ಹೊರಗಿನ ಗುಡಿಯ ಹಿಂಭಾಗಕ್ಕೆ ಬಂದಳು. ಬೆಳುದಿಂಗಳು ಎಲ್ಲೆಲ್ಲೂ ಚೆಲ್ಲಿತ್ತು. ದಾರಿ ಯಲ್ಲಿ ಸತ್ತವರನ್ನು ಹೂಳುವ ಸ್ಮಶಾನವಿತ್ತು. ಒಂದು ಸಮಾಧಿಯ ಬಳಿ ಹತ್ತಾರು ದೆವ್ವಗಳು ಕುಳಿತು ತಮ್ಮ ಹರಕು ಬಟ್ಟೆಗಳನ್ನು ತೆಗೆದುಹಾಕಿ ಸ್ನಾನಕ್ಕೆ ಸಿದ್ಧವಾಗುತ್ತಿದ್ದವು. ಅನಂತರ ಅವು ಹೊಸ ಹೆಣಗಳ ಗುಣಿ ಗಳನ್ನು ತಮ್ಮ ಕೈ ಬೆರಳುಗಳಿಂದ ಬಗಿದು, ಹೆಣಗಳ ದೇಹಗಳಿಂದ ಮಾಂಸ ವನ್ನು ಕಿತ್ತು ಗಬಗಬನೆ ತಿನ್ನಲಾರಂಭಿಸಿದವು. ಸುಶೀಲೆ ಅವಕ್ಕೆ ಬಹಳ ಹತ್ತಿರಲೇ ನಡೆದು ಹೋಗಬೇಕಾಗಿತ್ತು. ಅವು ಅವಳನ್ನು ಕ್ರೂರವಾದ ಭಯಂಕರವಾದ ದೃಷ್ಟಿಯಿಂದ ನೋಡಿದವು. ಆದರೆ ಅವಳು ಅವುಗಳ ಹತ್ತಿರ ಹೋದಾಗ ದೇವರ ನಾಮಗಳನ್ನು ಜಪಿಸಿದಳು. ಆದಷ್ಟು ಬೇಗ ಮುಳ್ಳು ಕಂತೆಗಳನ್ನು ಕಿತ್ತು, ಅವನ್ನು ಹೊತ್ತುಕೊಂಡು ಅರಮನೆಗೆ ಹಿಂತಿರುಗಿದಳು.

ಅವಳನ್ನು ಒಬ್ಬನು ಮಾತ್ರ ನೋಡಿದ. ಅವನೇ ರಾಜನ ಪುರೋಹಿತ. ಅವನು ರಾತ್ರಿಯೆಲ್ಲಾ ಎಚ್ಚರವಾಗಿರುತ್ತಿದ್ದ. ಈಗ ಅವನ ಅನುಮಾನಗಳು ಖಂಡಿತವಾಗತೊಡಗಿದವು, ನ್ಯಾಯವಾಗಿ ತೋರಿದವು. "ಅವಳು ಸಾಮಾನ್ಯ ಹುಡುಗಿಯಲ್ಲ; ಮಾಟಗಾತಿಯಾಗಿರಲೇಬೇಕು. ಆದ್ದರಿಂದಲೇ ಅವಳು ಈ ರೀತಿ ರಾಜನನ್ನೂ ಪ್ರಜೆಗಳನ್ನೂ ಮರುಳು ಮಾಡಿಬಿಟ್ಟಿದ್ದಾಳೆ" ಎಂದು ಅವನು ಯೋಚಿಸಿದ.

ತಾನು ಕಂಡ ಘಟನೆಗಳನ್ನೂ ತನ್ನ ಅನುಮಾನಗಳನ್ನೂ ಅವನು ದೊರೆಗೆ—ದೊರೆ ದೇವಸ್ಥಾನಕ್ಕೆ ಹೋಗಿದ್ದಾಗ—ತಿಳಿಸಿದ. ಆ ಚಾಡಿಯ

ನುಡಿಗಳು ಅವನ ಬಾಯಿಯಿಂದ ಹೊರಬಿದ್ದ ಒಡನೆಯೇ ದೇವಾಲಯದಲ್ಲಿದ್ದ ದೇವರುಗಳ ಚಿತ್ರಪಟಗಳೆಲ್ಲವೂ "ಅಲ್ಲ, ಸುಶೀಲೆ ನಿರಪರಾಧಿ, ಏನೂ ಅರಿಯುದವಳು" ಎಂದು ಹೇಳುವವೋ ಎನ್ನುವಂತೆ ಅಲ್ಲಾಡಿದವು. ಪುರೋಹಿತ ಅದಕ್ಕೆ ಬೇರೆಯ ಅರ್ಥವನ್ನು ಕಲ್ಪಿಸಿ ಅವು ಅವಳಿಗೆ ವಿರೋಧವಾಗಿ ದೂರು ಹೇಳುತ್ತಿದ್ದವೆಂದೂ ಅವಳ ಪಾಪದ ಕೆಲಸಗಳನ್ನು ಕಂಡು ಹೇಸಿ ತಲೆಯಲ್ಲಾಡಿಸುತ್ತಿದ್ದವೆಂದೂ ಹೇಳಿಬಿಟ್ಟ. ರಾಜನ ಕೆನ್ನೆಗಳ ಮೇಲೆ ಎರಡು ದೊಡ್ಡ ಕಣ್ಣೀರ ಹನಿ ಉರುಳಿತು. ಅವನು ಅನುಮಾನಪಡುತ್ತ ಮನೆಗೆ ಹೋದ. ರಾತ್ರಿ ನಿದ್ರಿಸುವವನಂತೆ ನಟಿಸಿದ. ಆದರೆ ಅವನ ಕಣ್ಣಿಗೆ ನಿದ್ದೆ ಹತ್ತಲಿಲ್ಲ. ಸುಶೀಲೆ ಎದ್ದು ತನ್ನ ಗುಹೆಯಂತಿದ್ದ ಕಿರುಮನೆಗೆ ಹೋಗುವುದನ್ನು ನೋಡಿದ. ದಿನದಿನಕ್ಕೂ ಅವನ ಮುಖದಲ್ಲಿ ಮೂಡಿದ ಕೋಪ ಹೆಚ್ಚಾಯಿತು. ಸುಶೀಲೆ ಅದನ್ನು ನೋಡಿದಳು. ಆದರೆ ಅದರ ಕಾರಣವನ್ನು ಊಹಿಸುವುದಕ್ಕೆ ಅವಳಿಗೆ ಸಾಧ್ಯವಾಗಲಿಲ್ಲ. ಗಂಡನ ಕೋಪದಿಂದ ಅವಳಿಗೆ ದಿಗಿಲಾಯಿತು. ಆದರೆ, ಅವಳು ತನ್ನ ಅಣ್ಣಂದಿರಿಗಾಗಿ ಈಗಾಗಲೇ ಏನು ತಾನೇ ಅನುಭವಿಸಿರಲಿಲ್ಲ? ಅವಳ ಕಣ್ಣಿನ ಉಪ್ಪು ಹನಿಗಳು ಅರಮನೆಯ ಕೆಂಪು ರೇಷ್ಮೆಯ ರತ್ನಗುಬಳಿಯ ಮೇಲೆ ಮಳೆಯಂತೆ ಉದುರಿ ಪ್ರಜ್ವಲಿಸುವ ವಜ್ರಗಳಂತೆ ಥಳಥಳಿಸುತ್ತಿದ್ದವು.

ಆದರೆ ಅವಳಾಗಲೇ ತನ್ನ ಕೆಲಸಗಳನ್ನು ಹೆಚ್ಚುಕಡಿಮೆ ಮುಗಿಸಿದ್ದಳು. ಇನ್ನೊಂದು ನಿಲುವಂಗಿ ಮಾತ್ರ ಉಳಿದಿತ್ತು. ಮತ್ತೆ ನಾರು ಮುಗಿದು ಹೋಯಿತು. ಅವಳ ಹತ್ತಿರ ಒಂದು ಮುಳ್ಳು ಕಂಥೆ ಕೂಡ ಇರಲಿಲ್ಲ. ಕಡೆಯದಾಗಿ ಅವಳು ಇನ್ನೊಂದು ಬಾರಿ ಊರ ಹೊರಗಿನ ಗುಡಿಯ ಹಿಂದೆ ಹೋಗಿ ಮುಳ್ಳನ್ನು ತರಬೇಕಾಗಿತ್ತು. ಅಲ್ಲಿ ತಾನು ಹಿಂದೆ ಕಂಡಿದ್ದ ದೆವ್ವಗಳನ್ನು ನೆನೆಸಿಕೊಂಡಾಗ ಅವಳ ಮೈ ಜುಮ್ಮೆಂದಿತು. ಆದರೇನಂತೆ? ಅವಳ ಮನಸ್ಸಿನ ನಿರ್ಧಾರ ಅವಳ ದೈವಭಕ್ತಿಯಷ್ಟೇ ನಿಶ್ಚಲವಾಗಿಯೂ ಪ್ರಬಲವಾಗಿಯೂ ಇತ್ತು.

ಸುಶೀಲೆ ಮುಳ್ಳು ಗಿಡಗಳಿದ್ದ ಸ್ಥಳಕ್ಕೆ ಹೊರಟಳು. ಹೊಂಚು ಕಾಯುತ್ತಿದ್ದ ರಾಜನೂ ರಾಜನ ಪುರೋಹಿತನೂ ಅವಳನ್ನು ಹಿಂಬಾಲಿಸಿದರು. ಅವಳು ಜನಸಂಚಾರವಿಲ್ಲದ ಕಡೆ ಹಾಳುಗುಡಿಯ ಹಿಂದಿನ ಸುಡುಗಾಡಿಗೆ ಹೋಗು

ವುದನ್ನು ಅವರು ನೋಡಿದರು. ಅವರು ಅವಳೊಡನೆ ಹಿಂದೆಯೇ ಹೋದಾಗ ದೆವ್ವಗಳು ಅವರಿಗೆ ಕಾಣಿಸಿಕೊಂಡವು. ಯಾವ ಸುಶೀಲೆಯನ್ನು ಅದೇ ದಿನ ಸಂಜೆ ತಾನು ಎಡೆಗಪ್ಪಿಕೊಂಡು ಮುದ್ದಾಡಿದ್ದನೋ ಆ ಸುಶೀಲೆ ದೆವ್ವಗಳ ನಡುವೆ ಕುಳಿತಿರುವುದಾಗಿ ರಾಜನಿಗೆ ತೋರಿತು. ಅವನು ಭಯದಿಂದಲೂ ಅತ್ಯಂತ ವ್ಯಥೆಯಿಂದಲೂ ಮುಖವನ್ನು ಬೇರೆಯ ಕಡೆಗೆ ತಿರುಗಿಸಿಬಿಟ್ಟನು.

ಕಡೆಗೆ ರಾಜ "ಪ್ರಜೆಗಳು ಅವಳ ವಿಷಯವಾಗಿ ಒಂದು ತೀರ್ಮಾನಕ್ಕೆ ಬರಬೇಕು" ಎಂದ. ಅದರಂತೆಯೇ ಊರಿನ ಜನಗಳೆಲ್ಲಾ "ಅವಳನ್ನು ಉರಿಯುವ ಬೆಂಕಿಗೆ ಎಸೆಯಬೇಕು" ಎಂದು ತೀರ್ಪು ಹೇಳಿದರು.

ಅನಂತರ, ಅಷ್ಟು ದಿನಗಳೂ ಅವಳಿದ್ದ ಸುಂದರವಾದ ರಾಜಯೋಗ್ಯವಾದ ಭವ್ಯಭವನದಿಂದ ಕೊಳಕು ಕೋಣೆಯೊಂದಕ್ಕೆ ಅವಳನ್ನು ಒಯ್ದರು. ಅಲ್ಲಿ ಸಾಕಾದಷ್ಟು ಗಾಳಿ ಬೆಳಕುಗಳು ಕೂಡ ಇರಲಿಲ್ಲ. ರೇಷ್ಮೆಯ ಮೃದುವಾದ ಹಾಸಿಗೆಯ ಬದಲಾಗಿ ಅವಳೇ ಆಯ್ದು ತಂದಿದ್ದ ಮುಳ್ಳಿನ ರಾಸಿಯನ್ನು ಅವಳಿಗೆ ಮಲಗಲು ಕೊಟ್ಟರು. ತಾನೇ ಹೆಣೆದಿದ್ದ ಸಿಲುವಂಗಿಗಳು ಅವಳ ಹೊದಿಕೆಯಾದವು. ಅವು ಕಠೋರವಾದ ಉರಿಯನ್ನುಂಟುಮಾಡುತ್ತಿದ್ದವು. ಆದರೆ ಅವಕ್ಕಿಂತಲೂ ಹೆಚ್ಚು ಪವಿತ್ರವಾದ ವಸ್ತು ಅವಳಿಗೆ ಬೇರೆ ಇರಲಿಲ್ಲ.

ಅವಳು ಮತ್ತೆ ಅನೇಕ ಸಾರಿ ದೇವರನ್ನು ಪ್ರಾರ್ಥಿಸಿ ಕೆಲಸಮಾಡಲು ತೊಡಗಿದಳು. ಸೆರೆಮನೆಯ ಹೊರಗಡೆ ಬೀದಿಯ ಪೋರರು ಅವಳನ್ನು ಹಾಸ್ಯಮಾಡಿ ಹಾಡುತ್ತಿದ್ದರು. ಕರುಣೆಯಿಂದ ಕೂಡಿದ ಒಂದು ಮಾತನ್ನು ಆಡಿ ಅವಳನ್ನು ಸಮಾಧಾನಪಡಿಸುವವರು ಯಾರೂ ಇರಲಿಲ್ಲ.

ಸಾಯಂಕಾಲದ ಹೊತ್ತಿಗೆ ಅವಳಿದ್ದ ಕೋಣೆಯ ಕಿಟಕಿಯ ಬಳಿ ಹಂಸಗಳು ರೆಕ್ಕೆ ಬಡಿಯುವ ಶಬ್ದ ಕೇಳಿಬಂತು. ಅಲ್ಲಿ ಬಂದಿದ್ದ ಹಂಸ ಅವಳ ಕಿರಿಯ ಅಣ್ಣ. ಅವನು ಬಹಳ ಪ್ರಯಾಸಪಟ್ಟು ಅವಳಿದ್ದ ಸ್ಥಳವನ್ನು ಪತ್ತೆಮಾಡಿದ್ದ. ಆದಿನ ರಾತ್ರಿಯೇ ಅವಳ ಜೀವಮಾನದಲ್ಲಿ ಕಡೆಯ ರಾತ್ರಿಯೊಂದು ಅವನಿಗೆ ಹೇಗೋ ಗೊತ್ತಾಗಿತ್ತು. ಆದರೂ ಅವನು ಸಂತೋಷದಿಂದ ಕಣ್ಣೀರು ಸುರಿಸಿದ. ಅದೃಷ್ಟವಶಾತ್ ಅವಳ ಹೆಣಿಗೆಯ ಕೆಲಸ ಮುಗಿಯುತ್ತ ಬಂದಿತ್ತು. ಅವಳ ಇತರ ಅಣ್ಣಂದಿರೂ ಅಲ್ಲಿಗೆ ಬಂದಿದ್ದರು.

ಸುಶೀಲೆ ಬೆಂಕಿಗೆ ಬೀಳುವ ಮೊದಲು ತಾನು ಅವಳ ಬಳಿ ಹೋಗಿ ಅವಳಿಗೆ ಧರ್ಮಬೋಧೆ ಮಾಡುವುದಾಗಿ ರಾಜನ ಪುರೋಹಿತ ರಾಜನಿಗೆ ಭಾಷೆಕೊಟ್ಟಿದ್ದ. ಅದೇ ರೀತಿ ಅವನು ಬಂದ. ಆದರೆ ಅವನ ಧರ್ಮಬೋಧೆಯನ್ನೂ ವೇದಾಂತವನ್ನೂ ಕೇಳಲು ಸುಶೀಲೆಗೆ ಸಮಯವಿರಲಿಲ್ಲ ಅವಳು ಏನೇ ಆಗಲಿ ಆರಾತ್ರಿ ತನ್ನ ಕೆಲಸವನ್ನು ಮುಗಿಸಲೇಬೇಕಾಗಿತ್ತು. ಇಲ್ಲದಿದ್ದರೆ ಅವಳು ಅಷ್ಟು ದಿನಗಳೂ ಅನುಭವಿಸಿದ್ದ ಕಷ್ಟನಷ್ಟಗಳೆಲ್ಲಾ ವ್ಯರ್ಥವಾಗುತ್ತಿದ್ದವು. ಆದಕಾರಣ ಅವಳು ಕೈಸನ್ನೆಗಳಿಂದಲೂ ತಲೆಯನ್ನು ಅಲ್ಲಾಡಿಸುವುದರಿಂದಲೂ ಪುರೋಹಿತನಿಗೆ ಹೊರಕ್ಕೆ ಹೋಗಬೇಕೆಂದು ಸೂಚಿಸಿದಳು. ಅವನು ಅವಳನ್ನು ನಿಂದಿಸುತ್ತಾ ಹೊರಟುಹೋದ. ತಾನು ನಿರಪರಾಧಿಯೆಂದು ಅವಳೇನೋ ಖಂಡಿತವಾಗಿ ನಂಬಿದ್ದಳು. ಆದ್ದರಿಂದ ಆದದ್ದಾಗಲಿ ಎಂದು ತನ್ನ ಕೆಲಸವನ್ನು ಮುಂದುವರಿಸಿದಳು.

ಆ ಕೋಣೆಯಲ್ಲಿದ್ದ ಚಿಕ್ಕಚಿಕ್ಕ ಇಲಿಗಳೆಲ್ಲಾ ಅವಳ ಸುತ್ತಲೂ ಓಡಾಡಿ ಅವಳಿಗೆ ನಾರನ್ನು ತಂದುಕೊಟ್ಟು ಸಹಾಯ ಮಾಡುತ್ತಿದ್ದವು. ಕಿಟಕಿಯ ಹತ್ತಿರ ಒಂದು ಸಣ್ಣ ಹಕ್ಕಿ ಕುಳಿತು, ರಾತ್ರಿಯೆಲ್ಲಾ ಹಾಡಿ ಅವಳಿಗೆ ಕೆಲಸ ಮಾಡಲು ಉತ್ತೇಜನ ಕೊಟ್ಟಿತು.

ಆಗತಾನೆ ಬೆಳಕು ಹರಿಯುವ ಚಿಹ್ನೆ ಕಂಡುಬಂತು. ಸೂರ್ಯ ಆಕಾಶದಲ್ಲಿ ಎದ್ದು ಕಾಣಲು ಇನ್ನೂ ಒಂದು ತಾಸುಬೇಕಾಗಿತ್ತು. ಆಗ ಹನ್ನೊಂದು ಜನ ಅಣ್ಣತಮ್ಮಂದಿರೂ ಅರಮನೆಯ ಹೆಬ್ಬಾಗಿಲಿನ ಹತ್ತಿರ ಬಂದು ನಿಂತು, ರಾಜನನ್ನು ಕಾಣಲು ಅನುಮತಿ ಬೇಡಿದರು. ಅದು ಸಾಧ್ಯವಿಲ್ಲವೆಂದು ಉತ್ತರ ಬಂತು. ಕತ್ತಲೆ ಇನ್ನೂ ಕರಗಿರಲಿಲ್ಲ. ರಾಜ ನಿದ್ರಿಸುತ್ತಿದ್ದ. ಅವನನ್ನು ಎಚ್ಚರಗೊಳಿಸುವ ಧೈರ್ಯ ಯಾರಿಗೂ ಇರಲಿಲ್ಲ. ಅವರ ಬೇಡಿಕೆಗಳೂ ಬೆದರಿಕೆಗಳೂ ನಿಷ್ಪ್ರಯೋಜಕವಾದವು. ಕಾವಲುಗಾರ ಮುಖವನ್ನು ತಿರುಗಿಸಿಕೊಂಡು ಹೊರಟುಹೋದ. ಇವರ ಮಾತುಗಳನ್ನು ಕೇಳಿದ ರಾಜನೇ ಸಂಗತಿ ಏನೆಂದು ತಿಳಿಯಲು ಎದ್ದುಬಂದ. ಆದರೆ ಅಷ್ಟುಹೊತ್ತಿಗೆ ಸರಿಯಾಗಿ ಪೂರ್ವದಿಕ್ಕಿನಲ್ಲಿ ಸೂರ್ಯ ಕಾಣಿಸಿಕೊಂಡ. ಆ ಸೋದರರೆಲ್ಲಾ ಮಾಯವಾದರು. ಅವರ ಬದಲು ಅರಮನೆಯ ಮೇಲೆ ಹನ್ನೊಂದು ಕಾಡು ಹಂಸಗಳು ಹಾರಾಡುತ್ತಿದ್ದವು.

ಊರಿನ ಜನ ನಗರದ ಹೊರಬಾಗಿಲಿನ ಆಚೆಗೆ ನಡೆದರು. ಅವರೆಲ್ಲರೂ ಮಾಟಗಾತಿ ಬೆಂಕಿಯ ಪಾಲಾಗುವುದನ್ನು ನೋಡಲು ತವಕಪಡುತ್ತಿದ್ದರು. ಸುಶೀಲೆ ಕುಳಿತಿದ್ದ ಗಾಡಿಯನ್ನು ಒಂದು ಬಡಕಲು ಕುದುರೆ ಎಳೆಯುತ್ತಿತ್ತು. ಅವಳಿಗೆ ಗೋಣಿಯ ಪಟ್ಟೆಯ ಸೀರೆಯನ್ನು ಉಡಿಸಿದ್ದರು. ಅವಳ ಸೊಗಸಾದ ನೀಳವಾದ ಕೂದಲು ಭುಜಗಳ ಮೇಲೆ ಇಳಿಯಬಿದ್ದು ಮನೋಹರವಾಗಿ ಹೊಳೆಯುತ್ತಿತ್ತು. ಅವಳ ಕೆನ್ನೆಗಳು ಸತ್ತವರ ಕೆನ್ನೆಗಳಂತೆ ಬಿಳುಪೇರಿದ್ದವು. ತುಟಿಗಳು ಮೆಲ್ಲನೆ ಅಲುಗಾಡುತ್ತಿದ್ದವು. ಕೈಬೆರಳುಗಳು ಕ್ಷಣವೂ ಬಿಡುವಿಲ್ಲದೆ ಹಸುರು ನೂಲನ್ನು ಹೊಸೆದು ಹೆಣೆಯುತ್ತಿದ್ದವು. ಸಾವನ್ನು ಕಾಣಲು ಹೋಗುವಾಗ ಕೂಡ ಅವಳು ತನ್ನ ಅಸಂಪೂರ್ಣವಾದ ಕೆಲಸವನ್ನು ಬಿಟ್ಟುಬಿಡುವಂತಿರಲಿಲ್ಲ. ಹತ್ತು ನಿಲುವಂಗಿಗಳು ಆಗಲೇ ಮುಗಿದು ಅವಳ ಕಾಲ ಬಳಿ ಬಿದ್ದಿದ್ದವು. ಹನ್ನೊಂದನೆಯದನ್ನು ಪೂರೈಸಿಬಿಡಲು ಅವಳು ಕಷ್ಟಪಟ್ಟು ಹೆಣಗುತ್ತಿದ್ದಳು. ಜನ ಅವಳನ್ನು ಕಂಡು ಹಿಯಾಳಿಸಿ ನಕ್ಕು ಕೇಕೆ ಹಾಕುತ್ತಿದ್ದರು.

"ಆಹಾ! ಆ ಮಾಟಗಾತಿಯನ್ನು ನೋಡು, ಹೇಗೆ ಗೊಣಗುತ್ತಿದ್ದಾಳೆ! ಅವಳ ಕೈಯಲ್ಲಿ ಒಂದು ಕೀರ್ತನೆಯ ಪುಸ್ತಕವಿಲ್ಲ. ಅವಳ ಬಾಯಿಂದ ಒಂದು ದೇವರ ನಾಮವಾದರೂ ಹೊರಡುವುದಿಲ್ಲ. ಅಲ್ಲಿ ಕುಳಿತುಕೊಂಡು ತನ್ನ ಮಾಟದ ಮಂತ್ರಗಳನ್ನು ಜಪಿಸುತ್ತಿದ್ದಾಳೆ. ಕಿತ್ತುಕೊಳ್ಳಿರೊ ಅದನ್ನು ಅವಳ ಕೈಯಿಂದ, ಸಾವಿರ ಚೂರುಮಾಡಿ ಹರಿದುಹಾಕಿಬಿಡಿ" ಎಂದು ಕೂಗುತ್ತಿದ್ದರು.

ಅವಳ ಕೆಲಸವನ್ನು ಹಾಳುಮಾಡಬೇಕೆಂದು ಜನರ ಗುಂಪು ಸುತ್ತಲೂ ನುಗ್ಗಿತು- ಅಷ್ಟುಹೊತ್ತಿಗೆ ಸರಿಯಾಗಿ ಹನ್ನೊಂದು ಬಿಳಿಯ ಕಾಡು ಹಂಸಗಳು ಕೆಳಗೆ ಹಾರಿಬಂದು ತಮ್ಮ ರೆಕ್ಕೆಗಳನ್ನು ಬಡಿಯುತ್ತಾ ಗಾಡಿಯ ಮೇಲೆ ಕುಳಿತುಕೊಂಡವು. ಅವನ್ನು ನೋಡಿ ಜನರ ಗುಂಪು ಹೆದರಿ ಹಿಂದಕ್ಕೆ ಸರಿಯಿತು.

ಜನರೆಲ್ಲಾ "ಇದು ದೇವರು ಕಳುಹಿಸಿರುವ ಸೂಚನೆ. ಅವಳು ನಿರಪರಾಧಿ, ಏನೂ ಅರಿಯದವಳು" ಎಂದು ಒಬ್ಬರ ಕಿವಿಯಲ್ಲೊಬ್ಬರು ಮಾತಾಡಿಕೊಂಡರು. ಆದರೆ ಹಾಗೆಂದು ಗಟ್ಟಿಯಾಗಿ ಹೇಳಲು ಅವರಿಗೆ ಧೈರ್ಯಸಾಲದು.

ಕೊಲೆಗಾರ ಸುಶೀಲೆಯ ಕೈ ಹಿಡಿದುಕೊಳ್ಳಲು ಹೋದ. ಆಗ ಅವಳು ಬೇಗನೆ ತಾನು ಹೆಣೆದಿದ್ದ ಅಂಗಿಗಳನ್ನು ಒಂದೊಂದು ಹಕ್ಕಿಯ ಮೇಲೆ ಒಂದ ರಂತೆ ಎಸೆದಳು. ಹನ್ನೊಂದು ಹಂಸಗಳೆಲ್ಲಾ ಅತಿ ಸುಂದರರಾದ ಹನ್ನೊಂದು ರಾಜಕುಮಾರರಾದವು. ಆದರೆ ಅವರಲ್ಲಿ ಎಲ್ಲರಿಗಿಂತಲೂ ಕಿರಿಯವನಿಗೆ ಒಂದು ತೋಳಿನ ಬದಲು ಹಂಸದ ರೆಕ್ಕೆಯಿತ್ತು. ಇದಕ್ಕೆ ಕಾರಣವೇನೆಂದರೆ, ಅವನ ನಿಲುವಂಗಿಗೆ ಒಂದು ತೋಳಿರಲಿಲ್ಲ. ಅದನ್ನು ಪೂರ್ತಿಯಾಗಿ ಹೆಣೆಯಲು ಸುಶೀಲೆಗೆ ಸಾಧ್ಯವಾಗಿರಲಿಲ್ಲ.

ಅವಳು "ಈಗ ನಾನು ಮಾತಾಡಬಹುದು! ನಾನು ನಿರಪರಾಧಿ!" ಎಂದಳು.

ನಡೆದದ್ದನ್ನೆಲ್ಲಾ ನೋಡಿದ ಜನದ ಗುಂಪು ಅವಳೊಬ್ಬ ಸಂನ್ಯಾಸಿಯೋ ಎಂಬಂತೆ ಅವಳ ಎದುರು ತಲೆಬಾಗಿ ನಮಸ್ಕರಿಸಿತು. ಆದರೆ ಆಗ ಅವಳು ನಿರ್ಜೀವಿಯ ತೆರದಲ್ಲಿ ತನ್ನ ಹಿರಿಯಣ್ಣನ ತೋಳಿನ ತೆಕ್ಕೆಯಲ್ಲಿ ಸಿಕ್ಕಿಬಿದ್ದಿದ್ದಳು. ಅವಳಿಗೆ ಅಷ್ಟೊಂದು ಆಯಾಸವೂ ಭಯವೂ ನೋವೂ ಉಂಟಾಗಿದ್ದವು.

ಅವಳ ಹಿರಿಯ ಸೋದರ "ಹೌದು, ಇವಳು ನಿರಪರಾಧಿ ಎಂದು ನುಡಿದು, ಅಲ್ಲಿದ್ದ ಜನಗಳಿಗೆ ತಮ್ಮ ಪೂರ್ವದ ಕತೆಯನ್ನೆಲ್ಲಾ ವಿವರಿಸಿ ಹೇಳಿದ.

ಅವನು ಮಾತಾಡುತ್ತಿದ್ದಾಗ, ಲಕ್ಷಾಂತರ ಹೂಗಳಿಂದ ಬಂದ ಹಾಗೆ ವಿಸ್ಮಯಕರವಾದ ಸುವಾಸನೆಯೊಂದು ಅಲ್ಲೆಲ್ಲಾ ಹರಡಿತು. ಸುಶೀಲೆಯ ದಹನಕ್ಕೆಂದು ರಾಸಿ ಹಾಕಿದ್ದ ಪ್ರತಿಯೊಂದು ಕಟ್ಟಿಗೆಯ ಚೂರೂ ಚಿಗುರಾಗಿ ಕೆಂಪು ಗುಲಾಬಿಗಳ ಎತ್ತರವಾದ ದೊಡ್ಡದೊಂದು ಬೇಲಿಯೋ ಎದ್ದು ಕಾಣು ಕಾಣುತ್ತಿತ್ತು. ಎಲ್ಲಕ್ಕಿಂತಲೂ ಮೇಲೆ, ತುತ್ತ ತುದಿಯಲ್ಲಿ ಒಂದು ಶುಭ್ರವಾದ ಬಿಳಿಯ ಹೂ ಅರಳಿತ್ತು. ಅದು ಒಂದು ನಕ್ಷತ್ರದಂತೆ ಹೊಳೆಯುತ್ತಿತ್ತು. ರಾಜ ಅದನ್ನು ಕಿತ್ತಿ ಸುಶೀಲೆಯ ತಲೆಗೆ ಮುಡಿಸಿದ. ಅವಳ ಹೃದಯ ಶಾಂತಿಮಯವಾಯಿತು. ಅವಳು ಆನಂದದಿಂದ ಕಣ್ಣು ತೆರೆದಳು.

ದೇವಾಲಯದ ಗಂಟೆಗಳೆಲ್ಲಾ ತಮ್ಮಷ್ಟಕ್ಕೆ ತಾವೇ ಸುಮಧುರವಾಗಿ ಧ್ವನಿ ಮಾಡ ತೊಡಗಿದವು. ಹಾಡುವ ಹಕ್ಕಿಗಳು ಅವರ ಸುತ್ತಲೂ ನೆರೆದವು. ಅವರು ಅರಮನೆಗೆ ಹಿಂದಿರುಗಿದರು. ಅಂತಹ ಮದುವೆಯ ಮೆರವಣಿಗೆ ಹಿಂದೆ ಯಾವ ದೊರೆಗೂ ಎಲ್ಲಿಯೂ ದೊರೆತಿರಲಿಲ್ಲ.